# ರಸ್ನಚುಕ್ಕಿ

ಜ.ಚ.ನಿ



ಶ್ರೀ ಅಮ್ಮೆಂಬಳ ಶಂಕರನಾರಾಯಣ ನಾವಡ

ಅವರಿಗೆ

'ದಾಸೋಹ' ಪ್ರಶಸ್ತಿಗ್ರಂಥಕ್ಕೆ

'ರನ್ನಬಕ್ಕ' ಕುರಿತು ಲೇಖನ ಬರೆಯಲು

— ಚ. ಸೀಂಬರ್ಗರ.

೧೧. ೧೦. ೬೪.

# ರನ್ನಚುಕ್ಕಿ

ಸೂರ್ಯಸಿಂಹಾಸನಾಧೀಶ್ವರ
ಶ್ರೀ ಜ. ಚ. ನಿ. ಸಂಸ್ಥಾನ.
ಗೂಳೂರು.

ಪ್ರಕಾಶಕರು :
ಶ್ರೀಶೈಲ ಜಗದ್ಗುರು ನಿಡುಮಾಮಿಡಿ ಪುಸ್ತಕ ಭಂಡಾರ
೪೯. ಹ. ಬ. ಸಮಾಜ ರಸ್ತೆ,
ಬೆಂಗಳೂರು ೪.

# ಮೂರು ನುಡಿ

ಸರಳವಾದ ವಿಷಯಗಳನ್ನು ಸರಳವಾಗಿಯೇ ಹೇಳುವುದು ಸುಲಭ; ಕ್ಲಿಷ್ಟವಾದ ವಿಷಯಗಳನ್ನು ಕ್ಲಿಷ್ಟವಾಗಿಯೇ ಹೇಳುವುದೂ ಸುಲಭ; ಆದರೆ ಕ್ಲಿಷ್ಟವಾದ ವಿಷಯಗಳನ್ನು ಸರಳವಾಗಿ ಹೇಳುವುದು ಮಾತ್ರ ಸುಲಭವಲ್ಲ. ನಿಜಕ್ಕೂ ಹೇಳಬೇಕೆಂದರೆ ಅದೊಂದು ಸಾಹಸ. ಆ ಸಾಹಸವನ್ನು ಕೈಕೊಂಡು ಯಶಸ್ವಿಗಳಾಗಿರುವುದರಿಂದಲೇ ಶ್ರೀ ಶ್ರೀ ಜ. ಚ. ನಿ.ಯವರು ಕಾವ್ಯಪ್ರೇಮಿಗಳ ಮೆಚ್ಚಿಗೆಗೆ ಪಾತ್ರವಾಗಿರುವುದು.

ಶ್ರೀ ಶ್ರೀಗಳವರು ರಸಋಷಿಗಳು ('ರಸ ಋಷಿ' ಎನ್ನುವ ಶಬ್ದ ಯಾವಾಗಲಾದರೂ ತನ್ನ ಸಂಪೂರ್ಣ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದ್ದರೆ ಅದು ಈಗಲೇ ಎಂದು ಹೇಳಬಲ್ಲೆ); ಋಷಿಗಳಾದರೂ ರಸಿಕರು—ಕವಿಗಳು. (ಶಿವನೂ ಕವಿ ತಾನೇ?) ಶ್ರೀಶ್ರೀಗಳವರು ತಮ್ಮ ಪ್ರಥಮ ಕವನ ಸಂಕಲನ 'ಹೊನ್ನ ಹಕ್ಕಿ'ಯಲ್ಲಿ ಸ್ವಾಮಿ-ಸಾಹಿತಿ ಇಬ್ಬರನ್ನೂ ಅಳೆದು, ತೂಗಿ ಹೀಗೆ ಬೆಲೆ ಕಟ್ಟುತ್ತಾರೆ:

"ಸಾಮ್ಯವಿಲ್ಲದಿರುವ
ಸ್ವಾಮಿ ಬಾಳು ಸಾಕು ಯುಗದೊಳು.
ಸಾಹಿತ್ಯ ಒದಗಿರೆ
ಸಾಹಿತಿಯಾಗಬೇಕಿಳೆಯೊಳು."

ಶ್ರೀಶ್ರೀಗಳವರು ಕಲ್ಪನೆಯ ದಂತದ ಗೋಪುರವನ್ನು ಕಟ್ಟಿಕೊಂಡು ಅಲ್ಲಿಯೇ ವಾಸಿಸಿ, ಹಕ್ಕಿ-ಚುಕ್ಕಿ, ಹಾಲು ಹೊಳೆ-ಹೂವುಮಳೆ—ಇವನ್ನೇ ಚಿತ್ರಿಸಿಕೊಂಡಿರುವ ಕವಿಗಳ ಗುಂಪಿಗೆ ಸೇರಿದವರಲ್ಲ. ಸುತ್ತಲ ಸಮಾಜವನ್ನು ಕಣ್ಣರಳಿಸಿ ನೋಡಿ, ತುಟಿ ಅದುರಿಸಿ ನುಡಿಯುತ್ತಾರೆ. ಒಳಿತನ್ನು ಕಂಡಾಗ 'ವಿಶ್ವಮಿತ್ರ'ರಾಗುವಂತೆಯೇ, ಕೆಡುಕನ್ನು ಕಂಡಾಗ 'ವಿಶ್ವಾಮಿತ್ರ'ರೂ ಆಗುತ್ತಾರೆ. ಹೇಳುವ ರೀತಿಯಾದರೋ ವಿಷಯ

ಕ್ಕಿಂತಲೂ ಸೊಗಸು. ಮೋಹಕ ಶೈಲಿಯ ಸಕ್ಕರೆಯನ್ನು ಸವರಿ, ಆಧ್ಯಾತ್ಮಚಿಂತನೆಯ ಕ್ವಿನೈನ್ ಗುಳಿಗೆಗಳನ್ನು ಕೊಡುತ್ತಾರೆ.

ಈ ಕವನ ಸಂಕಲನದಲ್ಲಿ ಕವಿ-ಗುರುಗಳು 'ಕ್ಷಾಮವನು ಕಂಡು' ಕೆರಳಿದ್ದಾರೆ; 'ಗಂಗೆ-ಗೌರಿ', 'ಭಕ್ತಿ-ಮುಕ್ತಿ'ಗಳೆಂಬ ಕಪ್ಪೆಗಳನ್ನು ತಕ್ಕಡಿಯಲ್ಲಿಟ್ಟು ತೂಗಿ ನೋಡಿದ್ದಾರೆ. 'ರನ್ನಚುಕ್ಕಿ'ಯನ್ನು ನೋಡಿ, 'ಅವರು ಬಾಳುವರು!' ಎಂದು ಹೇಳಿ, 'ಸೋಲು-ಗೆಲುವು'ಗಳನ್ನು ಒರೆ ಹಚ್ಚಿ, 'ಗುರು ನುಡಿಸಬಲ್ಲ'ನೆಂದು ಪ್ರತಿಪಾದಿಸಿ ಓದುಗರ ವಿಚಾರಶಕ್ತಿಗೆ ಒಳ್ಳೆಯ ವ್ಯಾಯಾಮ ಮಾಡಿಸಿದ್ದಾರೆ. 'ನುಡಿ ನೀರೆ ನೀ ಬಾರೆ!' ಎಂದು ಕರೆದು, 'ನೀನೊಲಿಯೆ ನೀನುಂಟು' ಎಂದು ಕೊರಗಿ, 'ನಿನಗಾಗಿ ನವೆಯುವೆನು' ಎಂದು ಕರಗಿ, 'ಹೇಳು ಕೆಳದಿ!' ಎಂದು ಬೇಡಿ, 'ನಿನಗೆ ಚನ್ನವೇ?' ಎಂದು ಕಾಡಿ, 'ಹೃದಯ ಗೀತೆ'ಯನ್ನು ಹಾಡಿ ರಸದೌತಣವನ್ನು ನೀಡಿದ್ದಾರೆ.

ಒಟ್ಟಿನಲ್ಲಿ; ತತ್ವ ಚಿಂತನೆ, ರಸ ಪ್ರತಿಪಾದನೆ—ಎರಡೂ ಒಮ್ಮೆಗೇ ಬೇಕೆನ್ನುವ ಕಾವ್ಯಪ್ರೇಮಿಗಳಿಗೆ 'ರನ್ನಚುಕ್ಕಿ' ಒಂದು ಒಳ್ಳೆಯ ಉಣಿಸು.

ಸಿರಿಗನ್ನಡಂ ಗೆಲ್ಗೆ!

"ಉದಯಶಶಿ"
ತೇರುಮಲ್ಲೇಶ್ವರ ಬೀದಿ
ಹಿರಿಯೂರು.
ದಿನಾಂಕ: ೩-೯-೫೬

ಎಚ್. ವಿ. ಚಂದ್ರಶೇಖರ್

# ಸಂಕ್ಷಿಪ್ತ ಪರಿಚಯ

ಮಲ್ಲೇಶ್ವರದ ಶ್ರೀ ನಾಗಪ್ಪನವರ ಮಕ್ಕಳು ಶ್ರೀ ಪುಟ್ಟಮ್ಮನವರು. ಇವರ ತಾಯಿ ಪರಮ್ಮನವರು. ಶ್ರೀ ಪುಟ್ಟಮ್ಮನವರ ಪತಿಯು ಚಿಕ್ಕ ತನದಲ್ಲಿಯೆ ಶಿವಾಧೀನರಾಗಿದಾರೆ. ಶ್ರೀ ಪುಟ್ಟಮ್ಮನವರಿಗೆ ಮಕ್ಕಳಿಲ್ಲ. ಇವರ ಮನಸ್ಸು ಚಿಕ್ಕದಲ್ಲ.

ಶ್ರೀ ಪುಟ್ಟಮ್ಮನವರು ಜಗದ್ಗುರು ನಿಡುಮಾಮಿಡಿ ಶ್ರೀಶೈಲ ಸಂಸ್ಥಾನದ ಕರಕಂಜಾತರು. ಕಳಂಕ ರಹಿತರು. ಭಕ್ತಿಭಾವವುಳ್ಳವರು. ಉದಾರ ಹೃದಯರು. ಲಿಂಗಪೂಜಾ ಪ್ರೇಮಿಗಳು.

"ರನ್ನಚುಕ್ಕಿ" ಗ್ರಂಥದ ಅಚ್ಚಿಗಾಗಿ ದ್ರವ್ಯರೂಪದಲ್ಲಿ ಸೇವೆ ಸಲ್ಲಿಸಿ ದಾರೆ. ಇದರಿಂದ ಗುರುಪೀಠದ ಸಾಹಿತ್ಯ ಸೇವೆಯನ್ನೂ ಸಲ್ಲಿಸಿದ ಭಾಗ್ಯವನ್ನು ಪಡೆದಿದಾರೆ. ಇವರಿಗೆ ಜಗದ್ಗುರು ಪಂಡಿತಾಚಾರ್ಯರು ಸಕಲ ಸನ್ಮಂಗಳಗಳನ್ನು ಆಶೀರ್ವದಿಸಲೆಂದು ಹೃದಯಾರೆ ಹರಸು ತ್ತೇವೆ.

ಶ್ರೀ ಹಿ. ವೀ. ಚಂದ್ರಶೇಖರ್ ತರುಣ ಸಾಹಿತಿಗಳು. ತಮ್ಮ ತನಿನುಡಿಯಲ್ಲಿ ಈ ಕವನ ಸಂಕಲನಕ್ಕೆ 'ಮೂರು ನುಡಿ'ಗಳನ್ನು ಬರೆದಿ ದಾರೆ. ಇವರಿಗೆ ಸಾಹಿತ್ಯಸೇವೆಯಲ್ಲಿ ಪ್ರಗತಿ ಉಂಟಾಗಲೆಂದು ಹಾರೈಸು ತ್ತೇವೆ.

೨–೯–೫೬
ಬೆಂಗಳೂರು.

ಶ್ರಿ ಜ. ಚ. ನಿ.

# ಪರಿವಿಡಿ

# ರನ್ನಚುಕ್ಕಿ

ಹೊನ್ನ ಹಕ್ಕಿ ಹಾರಿ ಹೋಯಿತು,
ರನ್ನ ಚುಕ್ಕಿ ತೊಳಗಿ ಬೆಳಗಿತು.

ಜೀವಪಕ್ಷಿ ಇಲ್ಲಿ ಬಾಳ್ವುದೆ,
ಜ್ಯೋತಿಧ್ರುವ ನಕ್ಷತ್ರವಾಗದೆ ?

ಉಸಿರು ಇಂದೊ ಅಂದೊ ಹೋಹುದು
ಹೆಸರು ಇಂದು ಅಂದು ನಿಲ್ವುದು.

ಮೋಹದಾಟ ಮುರಿಯದಿರುವುದೆ,
ಸೋಹಮೆಂಬುದೆಂದಿಗಳಿವುದೆ ?

ಹಿಂಸೆಯಿಂದದಾರು ಬಾಳ್ವರು,
ಹಂಸವಾಗಲಾರು ಸಾಯ್ವರು ?

ವೇಷರಚನೆ ಹಾರಿ ಹೋಹದೆ,
ಭಾಷೆರಚನೆ ಬಾಳಿ ಬೆಳಗದೆ ?

ಅರಿವು ಚುಕ್ಕಿಯಾಗಿ ಮೂಡಿರೆ,
ಮರೆವು ಹಕ್ಕಿಯಾಗಿ ಹಾರದೆ ?

ಬ್ರಹ್ಮಾಂಡದ ರೆಕ್ಕೆ ತೆರೆಯುಲಿ
ಬಾಹ್ಯ ಭಾವಪಕ್ಷಿ ಹಾರಲಿ,

ಪಿಂಡಾಂಡದಿರುಳು ಹರಿಯುಲಿ
ಪಿಂಡದರಿವು ತಾರೆ ಹೊಳೆಯುಲಿ !

# *ಅವರು ಬಾಳುವರು!

ಆರು ಬದುಕಿ ಏನು ಗಳಿಸಿದರಿಹದಲ್ಲಿ
ಆರು ಸತ್ತುದೇನು ಪಡೆದರು ಪರದಲ್ಲಿ
ಆರ ಬಾಳದಳಿಯದೇ ಬೆಳೆಯುವುದಿಲ್ಲಿ
ಆವರಿಳೆಯಲಿ ಬಾಳ್ವರೆಲ್ಲ ಕಾಲದಲ್ಲಿ.

ಆರ ದ್ರವ್ಯವೆಲ್ಲರಿಗೆಯು ಸಲ್ಲುತಿಹುದೊ
ಆರ ಜ್ಞಾನವೆಲ್ಲರಿಗೆಯು ಹಬ್ಬುತಿಹುದೊ
ಆರ ದೇಹ ಮನಗಳೆಲ್ಲರಿಗಾಗಿಹವೊ
ಅವರಿಳೆಯಲಿ ಬಾಳ್ವರೆಲ್ಲ ಕಾಲದಲ್ಲಿ.

ಆರ ಸುಖವದೆಲ್ಲ ಎಲ್ಲ ಜನರ ಸೌಖ್ಯವೋ
ಎಲ್ಲ ಜಗದ ನೋವದಾರ ಹೃದಯಕಪ್ಪುದೊ
ಆರ ಸೊಲ್ಲು ಎಲ್ಲರಲ್ಲಿ ಮೊಳಗುತಿಪ್ಪುದೊ
ಅವರಿಳೆಯಲಿ ಬಾಳ್ವರೆಲ್ಲ ಕಾಲದಲ್ಲಿ.

ಆರು ಲೋಕದಲ್ಲಿ ತಿಳಿದು ಚರಿಸುತಿಹರೊ
ಆರು ಹಗೆಗಳಾರಕೆ ಹೆದರದಿರುತಿಹರೊ
ಆರ ದಯೆಯು ಕೊಲೆಯು ಬಲಿಯನಿಕ್ಕಿರುವುದೊ
ಅವರಿಳೆಯಲಿ ಬಾಳ್ವರೆಲ್ಲ ಕಾಲದಲ್ಲಿ.

ಎಲ್ಲ ಗುಣಗಳಿಂದದಾರು ಕೂಡಿರುವರೊ
ಎಲ್ಲವನ್ನು ತಮ್ಮೊಳಾರು ತಿಳಿದಿರುವರೊ
ಎಲ್ಲ ಹೇಳ್ವುದೇನು ಯಾರು ವಿಶ್ವರೂಪರೊ
ಅವರಿಳೆಯಲಿ ಬಾಳ್ವರೆಲ್ಲ ಕಾಲದಲ್ಲಿ.

---

* ಶ್ರೀ ಜಾನಕಿರಾಮಶರ್ಮರವರ "ಆತುರಜೀವಿ" ಎಂಬ ಆಂಧ್ರ ಕವನ ವನ್ನೋದಿ ಬರೆದುದು.

# ಕ್ಷಾಮವ ಕಂಡು :

ಬಡವರಾ ಬಳಗವದು
ಬಳಲುತ್ತ ಬರುತಿಹುದು,
ದುಡಿದರೂ ಇಲ್ಲದಲೆ
ತೊಳಲುತ್ತ ಸಾಗಿಹುದು.

ಹೊಲದಲ್ಲಿ ಬೆಳೆಯಿಲ್ಲ
ಮನೆಯಲ್ಲಿ ಕಾಳಿಲ್ಲ,
ಕೈಯಲ್ಲಿ ಕಾಸಿಲ್ಲ
ಬಾವಿಯಲಿ ನೀರಿಲ್ಲ.

ಹೊಟ್ಟೆಗೇ ಹಿಟ್ಟಿಲ್ಲ
ಮೈಯೊಳಗೆ ಬಲವಿಲ್ಲ,
ಬಟ್ಟೆಗೇ ದುಡ್ಡಿಲ್ಲ
ಮಾನದಲಿ ಹಂಗಿಲ್ಲ.

ಕೊಲೆ ಸುಲಿಗೆ ನಡೆದಿಹುದು
ಹೊಲೆತನವು ಹೆಚ್ಚಿಹುದು,
ಬೆಲೆಯಿಲ್ಲ ಪ್ರಾಣಕ್ಕೆ
ನೆಲೆಯಿಲ್ಲ ಜೀವಕ್ಕೆ !

ಕಾಡ ಸೊಪ್ಪನು ತಿಂದು
ಕಾಡಗಾಯಿಯು ತಿಂದು
ಕಡೆಯಾಯ್ತು ಇನ್ನಿಲ್ಲ
ಬಂದಿಹುದು ಸಾವಿಂದು.

ಕುಡಿಯಲ್ಕೆ ನೀರಿಲ್ಲ
ತಿನಲಿಕ್ಕೆ ತಿನಿಸಿಲ್ಲ,
ನಡೆಯಲ್ಕೆ ನೆಣವಿಲ್ಲ
ಸಾಯಲ್ಕೆ ಸಾವಿಲ್ಲ.

ಮಳೆಯಿಲ್ಲ ಬೆಳೆಯಿಲ್ಲ
ದನಗಳಿಗೆ ಮೇವಿಲ್ಲ,
ಜನಗಳಿಗೆ ಕಳೆಯಿಲ್ಲ
ಮುಖದಲ್ಲಿ ಗತಿಯೇನು ?

ಹಸಿವಿಂಗೆ ತುತ್ತಾಗಿ
ಬಿಸಿಲಿಂಗೆ ಬೆಪ್ಪಾಗಿ,
ಬಸಿರುರಿದು ಬಾಯಾರಿ
ಬಾಳಿಹರು ಬೆಂಡಾಗಿ.

ಚಿಂತೆಯದು ಚಿತೆಯಾಗಿ
ಚಿತ್ತವನು ಸುಡುತಿಹುದು,
ಕಂತೆಯದು ಕೃಶವಾಗಿ
ಮೃತ್ಯುವನು ಹುಡುಕುವುದು.

ಕಣ್ಣಲ್ಲಿ ಕಳೆಯಿಲ್ಲ
ಬೆನ್ನಲ್ಲಿ ಬಲವಿಲ್ಲ,
ಎಲುವಿನಾ ಗೂಡಾಗಿ
ನಿಂತಿಹರು ಜನರೆಲ್ಲ.

ನೆಲವೆಲ್ಲ ಒಣಗಿಹುದು
  ಮರವೆಲ್ಲ ಬರಡಹುದು,
ನಾಡೆಲ್ಲ ಗೋಳಿಟ್ಟು
  ಕಣ್ಣೀರ ಕರೆಯುವುದು.

ಹಸಿದ ಮಕ್ಕಳಳುತ್ತ
  ಸಂಕಟವ ಸೂಸುವವು.
ಹಸಿವಿಂಗೆ ಏನಿಲ್ಲ
  ಕುಸಿದು ಕುಪ್ಪಳಿಸುವವು.

ಉಂಬುವರ ಬಳಿಯಲ್ಲಿ
  ಬಾಯ್ಬಿಡುತ ಬೇಡುತ್ತ,
ಕಣ್ಬಿಡುತ ನಿಂತಿರುವ
  ಬಡಪಾಯಿ ಮಕ್ಕಳನು ;

ಕಂಡು ಎದೆ ಒಡೆಯುವುದು
  ಕರುಳು ತಾ ಕೊರೆಯುವುದು,
ಕಾಲಮಾನವನು ಬಾಯ್
  ಬಲ್ಲಂತೆ ತೆಗಳುವುದು.

ನಂದನವು ನಂದನನ
  ತಂದನನ ಎನಿಸುವುದು,
ಎಂದೆನುವ ನಾಣ್ಣುಡಿಯು
  ನಿಜವಾಯ್ತು ಹಾ ವಿಧಿಯೆ !

ಈ ಕ್ಷಾಮ ದೆವ್ವವಿದು
  ತೊಲಗಿ ಹೋಗುವದೆಂದು,
ಆ ಕ್ಷೇಮ ದೇವತೆಯು
  ಒಲಿದು ಬಪ್ಪುದದೆಂದು ?

# ನುಡಿನೀರೆ ನೀ ಬಾರೆ!

ನುಡಿನೀರೆ ನೀ ಬಾರೆ
ಎನ್ನ ನೀ ಸಾರೆ
ನಿಡುಗಾಲ ಕಾಯ್ದಿದ್ದೆ
ಎನಗಿಲ್ಲ ನಿದ್ದೆ !

ನಿನಗಾಗಿ ತಪಸಿದೆನು
ನಿನಗಾಗಿ ಜಪಿಸಿದೆನು
ನಿನಗಾಗಿ ಹದುಳತೆಯು
ಹಂಗು ಹರಿದಿಹೆನು

ನಿನ್ನ ಚಲುವಿನ ನೋಟ
ನಿನ್ನ ಒಲವಿನ ಬೇಟ
ನಿನ್ನ ನವರಸದೂಟ
ಎನಗದುವೇ ಮಾಟ.

ಹೊತ್ತಿಗೇ ಊಟಿಲ್ಲ
ನೆತ್ತಿಗೇ ಬಿಡುವಿಲ್ಲ
ಮತ್ತೇನು ಬಯಸಿಲ್ಲ
ಹಂಬಲಿಸಿ ನಿನ್ನ

ಎನ್ನ ಕಂಗಳ ಚನ್ನೆ
ಎನ್ನ ಭಾಗ್ಯದ ರನ್ನೆ
ಎನ್ನ ಮನಸಂಪನ್ನೆ
ಚೆನ್ನುಡಿಯ ಕನ್ನೆ !

ವಿರಹದಿಂ ಬಳಲಿದೆನು
ಹೃದಯದಿಂದೊಲಿದೆನು
ಬರುವೆಯೆಂದರಿದೆನು
ಬಾರೆನುಡಿ ನೀರೆ !

ನಲಿನಲಿದು ನೀ ಬಾರೆ
ಒಲಿದೊಲವ ನೀ ತೋರೆ
ಒಳ ಚಲುವ ನೀ ಬೀರೆ
ಎನಗೆ ನುಡಿನೀರೆ !

ನಿನ್ನೊಲುವೆ ಎನ್ನ ಸಿರಿ
ನಿನ್ನಲುವೆ ಎನ್ನ ಗುರಿ
ನಿನ್ನೊಲುವೆ ಎನ್ನುಸಿರು
ನೀರೆ ನೀ ಬಾರೆ !

ಶಬ್ದ ಸದನವ ಕಟ್ಟಿ
ಅರ್ಥ ದೀಪವ ಹಚ್ಚಿ
ಭಾವ ಹಾಸಿಗೆ ಹಾಸಿ
ನಿನ್ನ ಕಾಯ್ದಿರುವೆ.

ನುಡಿಯ ಹೂವನು ಹೆಣೆದು
ನಡೆಯ ತೊಡಿಗೆಯ ಹಿಡಿದು
ನಿಷ್ಠೆಯೆಂಬರ ನೆಯಿದು
ಇರುಳೆಚ್ಚರಿದ್ದೆ.

ಶಬ್ದ ವಾಣಿಯೊಳಿರಿಸಿ
ಅರ್ಥ ಅರಿವಿನೊಳಿರಿಸಿ
ಭಾವ ಭಾವದೊಳಿರಿಸಿ
ಬಾರೆ ನೀನರಸಿ!

ತನುವಿನಲಿ ತಕ್ಕೈಸಿ
ಮನದಲ್ಲಿ ಮೋಳೈಸಿ
ಭಾವದಲಿ ಬೋಳೈಸಿ
ನೆಲಸು ನೀ ಬೆರಸಿ!

ಕಣ್ಣ ಕಣ್ಣೊಳಗೊತ್ತಿ
ಕರ ಕರದೊಳೊತ್ತೊತ್ತಿ
ಉರ ಉರದೊಳಚ್ಚೊತ್ತಿ
ಬೆರಸು ಮನ ಮುತ್ತಿ.

ಕುರುಳು ತಲೆ ಸೊಗಸೇನು
ಮುಗುಳು ನಗೆ ಸರಸೇನು
ಅರಳು ಗಣ್ ಸೊಬಗೇನು
ಕರುಳಿರಿಸು ನೀನು.

ಕರಣವಿಲ್ಲೆನುವೆಯಾ
ಚರಣವಿಲ್ಲೆನುವೆಯಾ
ಹರಣಗಳಾರವು?
ನೋಳ್ಪುದೇಂ ನೀರೆ!

ತರುಣಿ ನೀನೆಂದಿಗುಂ
ತರುಣ ನಾನಿಂದಿಗುಂ
ಬರಿದೆಯೋಚಿಸುವೆಯೇಂ
ಬಾರೆ ನುಡಿ ನೀಲೆ!

ನಿನ್ನೊಲುಮೆಯೇನಹಹ
ನಿನ್ನಲುಮೆಯೇನಹಹ
ನಿನ್ನಿರಿಮೆಯೇನಹಹ
ನೀನೊಲಿಯೆ ಧನ್ಯ

ವಾಗ್ರೂಪವೇ ರೂಪ
ವಾಗ್ರಸವೆ ಸವಿರಸ
ವಾಗ್ಗಂಧವೆ ಗಂಧ
ನಿನ್ದನಿಯೆ ಚಂದ

ಓಂಕಾರಿಣೀ ನೀನು
ಹ್ರೀಂಕಾರಿಣೀ ನೀನು
ಶಂಕಾರಿಣೀ ನೀನಿ-
ದಕೆ ಶಂಕೆಯೇನು?

ಬ್ರಹ್ಮಸತಿ ನೀನಾಗಿ
ವಿಷ್ಣು ಶ್ರೀ ನೀನಾಗಿ
ಶಿವಶಕ್ತಿ ನೀನಾಗಿ
ಜಗಭರಿತೆಯಾದೆ

ಕವಿಬ್ರಹ್ಮ ಸತಿ ನೀನು
ಕವಿಸುರವಾಣಿ ನೀನು
ಕವಿ ಕೀರ್ತಿ ಮಣಿ ನೀನು
ನಿನಗೊಲಿದೆ ನಾನು

ಶಿವಶಕ್ತಿಯೊಂದಾಗಿ
ಇಪ್ಪಂತೆ ಒಪ್ಪುವರೆ
ಕವಿಶಕ್ತಿಯೊಂದಾಗಿ
ಬಾಳೋಣ ಬಾರೆ!
ಬೆಳಗೋಣ ನೀರೆ!!

# ಸೋಲು - ಗೆಲುವು

ಸೋಲೆಂದು ಕುಗ್ಗುವುದು
ಗೆಲುವೆಂದು ಹಿಗ್ಗುವುದು
ಸೋಲು ಗೆಲುವುಗಳ ದಿಟವ ನರಿಯದೆ ಮನವು

ಸೋಲಿನೊಳಗಿರುವುದು
ಏಕಾಂತ ಸೌಖ್ಯವದು
ಸೋಲಿದುವೆ ಮೇಲು ಸಾಸಿರ ಗೆಲುವಿಗಿಂತ.

ಗೆಲುವೊದಗೆ ಗೆಳೆಯರಾ
ಬಳಗವದು ನೆರೆಯುವುದು
ಸೆಳೆಸೆಳೆದು ತಿಂಬುವುದು ಶಾಂತಿಗಿಂಬೆಲ್ಲಿ ?

ಗೆಲುವಿನಾ ವೈಭವವು
ಮುಳುವಿಗೆ ಮೂಲವದು
ಸೋಲಿನ ನಿರಾಶೆಯದು ನಿಶ್ಚಿಂತೆಯಹುದು:

ಗೆಲುವಿನಾ ಜಾಲದಲಿ
ಸಿಲುಕಿ ಸಾವುದುಚಿತವೆ
ಸೋಲೊದಗಿ ಶಾಂತಿಯಿರೆ ಸಾಲದೇ ನಿನಗೆ ?

ಸೋಲೊದಗೆ ಜನರು ನಿನ್
ಬಳಿಗೆ ಬಾರರು ನಿನ್ತೆ
ಗಳುವರಿದನು ತಿಳಿದರೆ ಸಾಕದುವೆ ನಿನಗೆ !

ಸೋಲೊದಗೆ ನಲಿ ನೀನು
ಗೆಲುವೊದಗೆ ಹಳಿ ನೀನು
ಸೋಲು ಗೆಲುವುಗಳ ದಿಟವರಿ ಮನವೆ ನೀನು

ಸೋಲೊದಗೆ ಮೇಲಾಳು
ಗೆಲುವೊದಗೆ ಕೀಳಾಳು
ಮೇಲು ಕೀಳುಗಳರಿದು ಬಾಳೇಳು ಮನವೆ!

# ಕಂಡೆ ಕೂಡಿ ಕೊಂಡೆ

ಹೇಳಿದೊಡನೆ ಕೇಳಿ ಕಂಡೆ
ಕೇಳಿದೊಡನೆ ಕೊಟ್ಟುಕೊಂಡೆ

ತೋರಲೊಡನೆ ಕಣ್ಣ ಕಂಡೆ
ಸೇರಲೊಡನೆ ಹಣ್ಣಕೊಂಡೆ

ಕರೆಯಲೊಡನೆ ಹೋಗಿಕಂಡೆ
ಒರೆಯಲೊಡನೆ ಹೊಂದಿಕೊಂಡೆ

ಶ್ರವಣಕೇಳಿ ಮನನ ಕಂಡೆ
ಸತ್ತುಕೂಡಿ ಚಿತ್ತುಕೊಂಡೆ

ನಿದಿಧ್ಯಾಸವೂಡಿ ಕಂಡೆ
ಸದಾನಂದ ಕೂಡಿಕೊಂಡೆ!

# ಗುರು ನುಡಿಸಬಲ್ಲ

ನರನ ಹೃದಯ ಮಧುರವೀಣೆ
ಬೇರೆ ನುಡಿಸುವವರ ಕಾಣೆ

ಗುರುವದನ್ನು ಮಿಡಿಯಬಲ್ಲ
ಪೊರೆವ ಹಾಡ ನುಡಿಸಬಲ್ಲ
ಭಕ್ತಿರಾಗ ಹೇಳಬಲ್ಲ
ಮುಕ್ತಿ ಪದಕೆ ನಡಿಸಬಲ್ಲ.

ಜ್ಞಾನ ತಾನ ಹಾಕಬಲ್ಲ
ಹೀನಭಾನ ನೂಕಬಲ್ಲ.
ಬುದ್ಧಿ ಪಲ್ಲವಂಕುರಿಸುವ
ಶುದ್ಧಿ ಪಲ್ಲವಿಯನುಸುರುವ.

ಕರುಳತಂತಿ ಮೀಟಬಲ್ಲ
ಮರುಳು ಕಿವಿಯ ತಿರುವಬಲ್ಲ
ಕರುಣರಸವ ತುಂಬಬಲ್ಲ
ಪರಮ ಸುಖದೊಳಿರಿಸಬಲ್ಲ.

ಸಪ್ತವ್ಯಸನ ಹರಿಯಬಲ್ಲ
ಸಪ್ತಜನನ ಮುರಿಯಬಲ್ಲ
ಸುಪ್ತಶಕ್ತಿ ಮೆರುಗಬಲ್ಲ
ಗುಪ್ತಕಾಂತಿ ಬೆಳಗಬಲ್ಲ

ಪ್ರಣವನಾದ ಹಿಡಿಸಬಲ್ಲ
ಪ್ರಣಯನಾದ ಬಿಡಿಸಬಲ್ಲ
ಏಕತಾನ ಹಾಡಬಲ್ಲ
ಏಕತೆಯನು ನೀಡಬಲ್ಲ.

ಆಲಿಸೊಳಗದೊ ಝೇಂಕಾರ
ಪಾಲಿಸೊಳಗದೊ ಓಂಕಾರ
ತೊಲಗಿ ಹೋಹುದು ಮಮಕಾರ
ತೊಳಗಿ ಬಪ್ಪುವು ಸಹಕಾರ!

ಶಿಷ್ಯಹೃದಯ ವೀಣೆಯೆಂಬೆ
ಗುರುವು ನುಡಿಸುವುದನು ಕಾಂಬೆ
ಬೇರದಾರು ನುಡಿಸರೆಂಬೆ
ಮೀರಿ ನುಡಿಯೆ ನಾನು ನಂಬೆ.

# ಸ್ವಾಮಿಗಳೆ, ಸಾಗಿಬನ್ನಿ !

ಮೋಸಕೃತಿಗಳ ಕಪಟ ವೇಷಭಾಷೆಗಳ ದು–
ರಭಿಮಾನವಂ ಬಿಟ್ಟು ಹೊರಗೆ ಬನ್ನಿ
ಆಶಿಸುವ ಐಕ್ಯತೆಯ ಕಜ್ಜದಲಿ ತರಬನ್ನಿ
ಸೋದರ ಸ್ನೇಹವಂ ತೋರಬನ್ನಿ
ತಳುವೇಕೆ ಸ್ವಾಮಿಗಳೆ ಸಾಗಿಬನ್ನಿ

ಅದೋ ನೋಡಿ ಪರಮತದ ಸ್ವಾಮಿಗಳ ವೃಂದವದು
ಭಿನ್ನಭಾವವಬಿಟ್ಟು ನಾಡಿನಲ್ಲಿ
ಸಮಭಾವ ಬಾವುಟವ ಸಂಭ್ರಮದೊಳೆತ್ತರದೆ
ಹಾರಿಸುತ ನಡೆದಿಹುದು ನಲ್ಮೆಯಲ್ಲಿ
ತಳುವೇಕೆ ಸ್ವಾಮಿಗಳೆ ಬನ್ನಿರೆಲ್ಲಿ ?

ಬೆರೆಯದಿರಿ ಸಮಯದಾ ಸಂಕೋಚ ಭಾವದಲಿ
ಬಳಲದಿರಿ ಗುರುವಿರತ ಕೋಟಲೆಯಲಿ
ಮಿಗೆ ನಾವು, ಕೀಳವರು ಎಂಬುವೀ ಕಲ್ಪನೆಯ
ಕಿತ್ತೆಸೆದು ಹಾಕಿರೈ ಈಚೆಗಿನ್ನು
ತೋರಿರೈ ಸ್ವಾಮಿಗಳೆ ಸಾಮ್ಯವನ್ನು !

ಬಸವಣ್ಣ ನುಡಿಗಳನು ಬಾಯಲ್ಲಿ ನುಡಿದೇನು
ನಡೆಯಲ್ಲಿ ತೋರಿದರೆ ಸಾಲದೇನು ?
ವೈಷಮ್ಯ ಭಾವಕ್ಕೆ ಕಿಚ್ಚಿಟ್ಟು ಕಿವಿಗೊಟ್ಟು
ಸಮರಸದಿ ಬಾಳಿದರೆ ಆಗದೇನು,
ಸಂತಸದಿ ಸ್ವಾಮಿಗಳೆ ಹೇಳಿರೇನು ?

ಕಾವಿಯಂ ತೆಯ್ದು ಬಿಳಿ ಬಟ್ಟೆಗಳನದರಲ್ಲಿ
ಅದ್ದಿ ಬಣ್ಣವ ಮಾಡಿ ಹೊದ್ದರೇನು
ಸ್ವಾರ್ಥವಂ ತೆಯ್ದು ಸುಮುಭಾವವಂ ಸಲೆತಾಳ್ದು
ನಡೆದಲ್ಲಿ ಸೊಗ ತಾನು ಸಾರದೇನು,
ದುಗುಡೇಕೆ ಸ್ವಾಮಿಗಳೆ ಸೇರದೇನು?

ಸಮರಸದ ಗೀತೆಯಂ ದೆಸೆದೆಸೆಗೆ ಕೇಳ್ವಂತೆ
ಸರವೆತ್ತಿ ಕರವೆತ್ತಿ ಹಾಡಿ ಕೂಡಿ
ಮಣಿಹವಂ ಮಾಡಿದರೆ ಪ್ರಾಪ್ತಿಸುವ ಫಲವನ್ನು
ಕಂಡರಿದು ಸವಿದು ನಲಿದಾಡಿ ನೋಡಿ
ತಳುವೇಕೆ ಸ್ವಾಮಿಗಳೆ ಬನ್ನಿ ಕೂಡಿ!

# ಜಗನ್ಮಾತೆ

ಶಂಕರೀ ಶುಭಕರೀ ಸುವಿಖ್ಯಾತೇ
ಶ್ರೀಕರೀ ಧೀಕರೀ ಜಗನ್ಮಾತೇ

ಬಯಲಿನಲ್ಲಿ ಮೊದಲು ಜನಿಸಿದವಳು ನೀನೆ
ಲಯವ ಕಳೆದು ಸ್ವಯುವಗಳಿಸಿದವಳು ನೀನೆ
ಜಗಕೆ ಜನನವಿತ್ತ ಮೊದಲ ಮಾತೆ ನೀನೆ
ಜನಕೆ ನೇಹವಿತ್ತ ಪ್ರಥಮ ಪ್ರೀತೆ ನೀನೆ

ಕೃಷಿಯ ಮಾಡುವಂಗೆ ಕರ್ಮಶಕ್ತಿ ನೀನೆ
ಋಷಿವ್ರತಸ್ಥನಿಗೆ ಆದಿಶಕ್ತಿ ನೀನೆ
ಭುವನ ಪಾಲಿಪರಿಗೆ ಕ್ಷಾತ್ರಶಕ್ತಿ ನೀನೆ
ಕವನ ಕಟ್ಟುವಂಗೆ ಜ್ಞಾನಶಕ್ತಿ ನೀನೆ

ಜಗವ ತುಂಬಿ ನಿಂತ ಪ್ರಕೃತಿ ಸೊಬಗು ನೀನೆ
ಜಗದ ಕಣ್ಣ ದಣಿಸ ನಿಂತ ಹೊನ್ನ ೀನೆ
ಜನದಮನವ ಸೆಳೆದು ಮೆರೆವ ಚೆಲುವೆ ನೀನೆ
ಜನದ ಬದುಕು ಬೆಳಸುತಿರುವ ನಲವೆ ನೀನೆ

ನಾದಮೂರ್ತಿ–ಸತ್ಯವೇದ ಕೀರ್ತಿ ನೀನೆ
ಬಿಂದು ಕಾಂತಿ–ನಿತ್ಯವಿಂದು ಶಾಂತಿ ನೀನೆ
ಕಲೆಯ ಪ್ರತಿಮೆ ಮೇಣು ನೆಲೆಯ ಹಿರಿಮೆ ನೀನೆ
ಇಳೆಯ ಬಸಿರು ಮೇಣು ಉಸಿರು ನೀನೆ.

ಜಗದ ಉದಯು ನೀನೆ ಜಗದ ಪ್ರಳಯು ನೀನೆ
ಜಗದ ಗತಿಯು ನೀನೆ ಜಗದ ಸ್ಥಿತಿಯು ನೀನೆ
    ಜಗದ ಬಲವು ನೀನೆ ಜಗದ ಫಲವು ನೀನೆ
    ಜಗದ ಗೆಲವು ನೀನೆ ಜಗದ ಒಲವು ನೀನೆ.

ದಿವ್ಯಮುಕ್ತಿಮಾತೆ ಭವ್ಯಸಕ್ತಿದಾತೆ
ನವ್ಯಭಕ್ತಿ ಪ್ರೀತೆ ಸೇವ್ಯೆ ಜಗನ್ಮಾತೆ
    ತನ್ನೊಳುದಿಸಿದಂದೆ ನನ್ನ ಮನಕೆ ಬಂದೆ
    ನನ್ನ ನೆನಸಿಗೆಂದೊ ನೀನು ಸಾರಿ ನಿಂದೆ.

# ಭಕ್ತಿ - ಮುಕ್ತಿ

೧

ಭಕ್ತಿಯೆನ್ನ ಜೀವರಕ್ತಿ
ಮುಕ್ತಿ ತನ್ನ ದೇವಶಕ್ತಿ
ನಾನಿದರ್ಪಿಸುವುದು ಭಕ್ತಿ
ನೀನನುಗ್ರಹಿಸುವುದು ಮುಕ್ತಿ

೨

ಭಕ್ತಿಯೆನ್ನ ಉರದ ಚಿನ್ನ
ಮುಕ್ತಿಯೆನ್ನ ಶಿರದ ರನ್ನ
ತೊಡೆವುದೊಂದು ಬಾಳ ಬನ್ನ
ಕೊಡುವುದೊಂದು ಬೆಳಗು ತನ್ನ

೩

ಭಕ್ತಿಜೀವ ರಸದ ಝುರಿಯು
ಮುಕ್ತಿದೇವ ರಸದ ತೊರೆಯು
ಬಕ್ತಿಯೆನ್ನ ಬಾಳಸಿರಿಯು
ಮುಕ್ತಿ ನಿನ್ನ ಮೇಳ ಪರಿಯು.

೪

ಭಕ್ತಿಯೊಳಗಿರುವುದು ಭೇದ
ಮುಕ್ತಿಹೊಳಗಿರುವುದಭೇದ
ತವಕವಹುದು ಭೇದದಿಂದ
ತೃಪ್ತಿಯಹುದಭೇದದಿಂದ

೫

ಭಕ್ತಿಯೆನ್ನ ಬಾಳಿನೊಸಗೆ
ಮುಕ್ತಿಯೆನ್ನ ಬಾಳಬೆಸುಗೆ
ಭಕ್ತಿಬಿಡದೆ ಮನದೊಳರಗೆ
ಮುಕ್ತಿ ಸೌಖ್ಯವಹುದು ತನಗೆ

೬

ಭಕ್ತಿಜೀವ ಭಾವಕೊಗ್ಗಿ
ಮುಕ್ತಿಭಾವ ಭವಕದಗ್ಗಿ
ಭಕ್ತಿಜೀವ ರಸದ ಬುಗ್ಗಿ
ಮುಕ್ತಿಭಾವ ರಸದಸುಗ್ಗಿ

೪

ಭಕ್ತಿಯೆನ್ನ ಸ್ವಾರ್ಥತ್ಯಾಗ
ಮುಕ್ತಿಯೆನ್ನ ಸುಖದ ಭೋಗ
ಭಕ್ತಿಯೆನ್ನ ಜೀವರಾಗ
ಮುಕ್ತಿಯೆನ್ನ ದೇವಯೋಗ.

೮

ಭಕ್ತಿಯಿದುವೆ ಜೀವಕಿರಣ
ಮುಕ್ತಿಯದುವೆ ದೇವ ಕರುಣ
ಎನ್ನಭಕ್ತಿ ನಿನಗೆ ಚರಣ
ನಿನ್ನಮುಕ್ತಿ ನನಗೆ ಹರಣ

೯

ಭಕ್ತಿ ಒಂದು ಜೀವನಾಂಗ
ಮುಕ್ತಿ ಒಂದು ದೇವಲಿಂಗ
ಭಕ್ತಿ ಸತ್ಯ ಸಾಧನಾಸ್ಯ
ಮುಕ್ತಿ ನಿತ್ಯ ಸಾಮರಸ್ಯ

# ದಾಸಮಯ್ಯನ ಸೂಳ್ನುಡಿಗಳ ಸವಿದು !

ದೇವ ದಾಸಮಯ್ಯ ಸೂಳ್ನುಡಿಗಳ ಸೊಗಸು ಏನದು ?–
ಎಮಗೆ ಬಿಸಸಲಾಗದು.

ನುಡಿಯು ಗಡಣ ಹೂಗಳಿಂದ ಹೊಸತುಹಾರ ರಚಿಸಿದ,
ನುಡಿಯು ಚಲುವ ಬೆಳಸಿದ.

ಅರ್ಥದೀಪ್ತಿಯುಳ್ಳ ವಚನ ರನ್ನದೀಪ ಬೆಳಗಿದ,
ಅಂಧಕಾರವಳಿಸಿದ.

ಭಾವಪುಷ್ಟಿ ಪೂಗ ಬಳಸಿ ಬೆಳಸಿ ಮನವ ಮುಟ್ಟಿದ,
ಎಮ್ಮ ಭಾವ ತಟ್ಟಿದ.

ದೇವತುಷ್ಟಿ ರಾಗ ಬರಸಿ ಬೆರಸಿ ಹೃದಯ ಮೆಚ್ಚಿದ,
ಹರುಷ ಕಡಲ ಹೆಚ್ಚಿದ.

ಮೊತ್ತಮೊದಲು ವಚನರಚಿಸಿ ಮುನ್ನ ಸೇವೆ ಮಾಡಿದ,
ಚನ್ನಗೀತ ಹಾಡಿದ.

ಮೃತ್ಯುಪಥದಿ ಸಾಗಿದವರ ಕರ್ಣಮನವ ತಣಿಸಿದ,
ವರ್ಣಭೇದವಳಿಸಿದ.

ತನ್ನ ಸೂಳ್ನುಡಿಗಳ ಮುಖದಿ ತನ್ನನುಭವ ಸಾರಿದ,
ತನ್ನ ತನವ ತೋರಿದ.

ತನ್ನ ನುಡಿಯು ಸೂತ್ರದಿಂದ ಬಾಳವಸ್ತ್ರನೆಯ್ದಿಹ,
ವಚನಶಾಸ್ತ್ರ ಸುಯ್ದಿಹ.

ತನ್ನ ಶಬ್ದಧಾನ್ಯದಿಂದ ತವನಿಧಿಯನು ತಾಳ್ದಿಹ,
ಸಂತೃಪ್ತಿಯನು ಸಾರ್ದಿಹ.

ಅಗ್ಗಳಿಕೆಯ ದಾಸನವನು ಪತಿಯು ದುಗ್ಗಳವ್ವೆಗೆ,
ಗತಿಯು ಸುಗ್ಗಳವ್ವೆಗೆ !

# ಬರಗಾಲ ಬವಣೆ

ಬರುವ ಮಳೆ ಬರಲಿಲ್ಲ
ಬೆಳೆವ ಬೆಳೆ ಬೆಳೆದಿಲ್ಲ
ಕೆರೆಗಳಲಿ ನೀರಿಲ್ಲ
ಜನರೆಲ್ಲ ಗೋಳಿಟ್ಟು ಗೋಗರೆವರು
ಬಲವಿಲ್ಲ ಕಂಗೆಟ್ಟು ಜೋಲಿಡುವರು
ಅನ್ನಿಲ್ಲ ಬಾಯ್ಬಿಟ್ಟು ಶೋಕಿಸುವರು.

ಪಶುಗಳಿಗೆ ಹುಲ್ಲಿಲ್ಲ
ಶಿಶುಗಳಿಗೆ ಹಾಲಿಲ್ಲ
ಬದುಕಿಸುವ ಬಗೆಯಿಲ್ಲ
ಪಶುಗಳನು ಬಲ್ಲಂತೆ ಮಾರುತಿಹರು
ಶಿಶುಗಳನ್ನು ಕಲ್ಲಂತೆ ಕಾಣುತಿಹರು
ಮುಂಬರುವ ದುರಂತಕೆ ಬಳಲುತಿಹರು.

ಮುದಿಯರಿಗೆ ಉಣಲಿಲ್ಲ
ಸತಿಯರಿಗೆ ಉಡಲಿಲ್ಲ
ಉಳಿದವರ ಪಾಡೇನು
ವೃದ್ಧರಾ ಪ್ರಾಣಗಳು ಗಾಳಿಯಲ್ಲಿ,
ಮುಗ್ಧೆಯರ ಮಾನಗಳು ದೂಳಿಯಲ್ಲಿ;
ತೂರುತಿವೆ ಸೇರುತಿವೆ ನೋಳ್ಪರಿಲ್ಲ.

ಇರುವ ಮಳೆಯೊಳು ಹೋಗಿ
ಪರರ ಪ್ರಾಣವ ನೀಗಿ
ಇರುಳು ಸುಲಿಗೆಯ ಮಾಡಿ

ಜೀವಿಸಲು ಜನರೀಗ ಹೆಣಗುತಿಹರು
ನೀತಿಯನು ಭೀತಿಯನು ಕಾಣದಿಹರು
ಬರಗಾಲ ಬಂದಾಗ ಧರ್ಮವೆಲ್ಲಿ ?

ಬರಗಾಲ ಬಂದಾಯ್ತು
ಸಿರಿಗಾಲ ಹಿಂದಾಯ್ತು
ಉಳಿಗಾಲವಿಲ್ಲಾಯ್ತು
ನಂದನವೆ ಏತಕ್ಕೆ ಬಂದೆ ನೀನು
ನಂದಿಸಲು ಪ್ರಾಣಗಳ ಬಂದೆಯೇನು ?
ಇನ್ನೇಸು ಕಾಲಿರುವೆ ಸಾಗು ನೀನು.

# ವಕ್ರವರ್ತನೆ!

ಕಣ್ಣ ಕಲ್ಪನೆ ಬಗೆಯು ಭಾವನೆ
ಮಾತು ಮಾಳ್ಕೆಯುದೆಲ್ಲ ವಕ್ರವರ್ತನೆ!

ಕಣ್ಣಲ್ಲಿ ಕೆರಳುವಿರಿ ಕಲ್ಪನೆಯ ಮಾಡುವಿರಿ
ಭಾವನೆಯ ಬೇರ್ಪಡಿಸಿ ಬಾಧಿಸುವಿರಿ
ಮಾತಿನಲಿ ಗದರುವಿರಿ ಮುಂದರಿಯರಿ.

ಬಂದರೇ ಸೈರಿಸರಿ ಬಾರದಿರೆ ಬಳಲುವಿರಿ
ತಿಂದರೆ ಬೈಯುವಿರಿ ತಿನ್ನದಿರಲು
ನಿಂದೆಯಾಡುವಿರಿ ಮನಬಾರದಿರಲು.

ಏನೊಂದನರಿಯದರ ಕರತಂದು ಭಕ್ತಿಯನು
ಮಾಡೆಂದು ಹಚ್ಚುವಿರಿ ನೀವೆ ಮೊದಲು
ಹಿಂದೊಂದನಾಡುವಿರಿ ಬಗೆದು ಕವಲು,

ಬಗೆ ಬರಲು ಹೊಗಳುವಿರಿ ಬಗೆಬಾರದಿರಲದನೆ
ತೆಗಳುವಿರಿ ದೂರುವಿರಿ ಲೇಸಿದೇನು;
ಹಿರಿತನಕೆ ನೀವ್ ಹೇಳಿ ವಾಸಿಯೇನು?

ಕಂಡಲ್ಲಿ ಕೆಮ್ಮನೇ ಕೆಂಡದಂತಾಗುವಿರಿ
ಕಾಣದಿರೆ ಕಲ್ಪನೆಯ ಜೋಡಿಸುವಿರಿ
ಕೃತಿಯಲ್ಲಿ ಬಲ್ಲಂತೆ ಮಾಡಿಸುವಿರಿ.

ನೆರವಿಗೊಬ್ಬರನಿರಿಸೆ ಏತಕೆಂದೆನ್ನುವಿರಿ
ಇರಿಸದಿರೆ ಯಾರಿಲ್ಲ ಎಂಬಿರಲ್ಲ
ಬರಿದೆ ಬಳಲಿಕೆಗಿದಿಂಬಾಯಿತಲ್ಲ!

ಹಿಂದಿರಲು ಒಂದು, ಮುಂದುವರಿಯಲು ಮತ್ತೊಂದು ;
ಆಡಿದರೆ ಒಂದು ಆಡದಿರಲೊಂದು
ಲೇಸಾಯ್ತು ಬಂಧನವು ಜೊತೆಯ ಸಂದು.

ಬಲ್ಲವರ ಧಿಕ್ಕರಿಸಿ ಹೊಲ್ಲಹರ ಸತ್ಕರಿಸಿ
ಕುಲ್ಲತನದ ನಡತೆಯನು ಹೊರಗೆ ಸೂಸಿ
ಸಲ್ಲದಂತೆ ಹೋಗುವುದೆ ಪರದೇಶಿ !

ನಿಮ್ಮಿಂದ ಲೇಸಾಯ್ತು ನಿಮ್ಮಿಂದ ವಾಸಾಯ್ತು
ನಿಮ್ಮಿಂದ ಜನತೆಯಲಿ ಭಾಸವಾಯ್ತು
ಆದರೇಂ ಸಹಕಾರವಿಲ್ಲವಾಯ್ತು.

# ಪೂಜೆ - ಪೂಜಿ !

ನಿತ್ಯಸ್ನಾನ ನಿತ್ಯಧ್ಯಾನ
ನಿತ್ಯಜಪವು ನಿತ್ಯತಪವು
ಶುಚಿಯು ಇಲ್ಲ ರುಚಿಯು ಇಲ್ಲ
ಪೂಜೆ ಪೂಜಿ – ಪೂಜೆ ಪೂಜಿ !

ನಿತ್ಯಮಂತ್ರ ನಿತ್ಯತಂತ್ರ
ನಿತ್ಯಪುಷ್ಪ ನಿತ್ಯಬಾಷ್ಪ
ಶಾಂತಿಯಿಲ್ಲ ದಾಂತಿಯಿಲ್ಲ
ಪೂಜೆ ಪೂಜಿ – ಪೂಜೆ ಪೂಜಿ !

ನೀರು ಹಾಲು ನಿತ್ಯ ಎರೆದು
ರುದ್ರಮಂತ್ರ ನಿತ್ಯನೆನೆದು
ಬರಿದೆ ಹೋಯ್ತು ಕರುಣೆಯಿಲ್ಲ
ಪೂಜೆ ಪೂಜಿ – ಪೂಜೆ ಪೂಜಿ !

ಧೂಪಹಾಕಿ ದೀಪವುರಿದು
ಕೋಪ ತಾಪ ಪಾಪಬೆಳೆದು
ಹೆಚ್ಚಿಹೋಯ್ತು ಏನು ಸುಖವು
ಪೂಜೆ ಪೂಜಿ – ಪೂಜೆ ಪೂಜಿ !

ಸ್ತೋತ್ರಹಾಡಿ ಸಾಸ್ತ್ರಮಾಡಿ
ಕುಹಕ ತಂತ್ರ ಮಂತ್ರಮಾಡಿ
ಪರರಮೋಸ ಮಾಡಿಯಾಯ್ತು
ಪೂಜೆ ಪೂಜಿ – ಪೂಜೆ ಪೂಜಿ !

ರನ್ನ ಚುಕ್ಕಿ

ನಡೆನುಡಿಯೊಡಗೂಡಿಯಿರೆ
ಅರಿವನುಭವಗಳುದಿಸಿಯಿರೆ
ಬಾಹ್ಯಪೂಜೆ ಮಾಡಿಯೇನಾ-
ಪೂಜೆ ಪೂಜೆ – ಪೂಜೆ ಪೂಜೆ!

# ತುಂಬಿದ ಕೃಷ್ಣೆಯಲ್ಲಿ ತೇಲುವಾಗ !

ಹೊಳೆಯು ತುಂಬಿ ತುಳುಕಿ ಉಲುಕಿ ಹರಿಯುತಿರುವುದು
ಬೆಳೆಯು ತೆನೆಯ ಹಾಕಿ ಬಳುಕಿ ತೊನೆಯುತಿರುವುದು
ಲೆಂಪೆ ಹೊಳೆಯ ತುಂಬಬೆಳೆದು ಹೊಳೆದು ಮೆರೆವುದು
ಕೊಂಪೆ ದಡದಿ ಹಸುರು ಮುಡಿದು ಮೊಳೆದುದು.

ಸೃಷ್ಟಿ ಸೊಬಗು ಸೂಸಿ ಹಾಸಿ ನಳಿಸುತಿರುವುದು
ದೃಷ್ಟಿ ಸೃಷ್ಟಿ ಸೊಬಗಿಗೆಳಸಿ ಕಲಸಿ ನಲಿವುದು
ನಾವೆ ನೀರ ಮೇಲೆ ತಾನು ತೇಲುತಿರಲದು
ಭಾವವೊಲಿದು ಕವನವನ್ನು ಕಟ್ಟುತಿತ್ತದು.

ಕೃಷ್ಣೆ ತನ್ನ ಕೃಷ್ಣಕಾಂತಿ ಜಲವ ನೀಯುತ
ತೃಷ್ಣೆಯನ್ನು ಕಳೆದು ಜನರ ಮನವ ತಣಿಸುತ
ಮುಂದ ಮುಂದವಾಗಿ ಗಂಗೆ ಹರಿಯುತಿತ್ತದು
ಚಂದ ಚಂದವಾಗಿ ಕಂಗೆ ತೋರುತಿತ್ತದು.

ನೋಡಿ ನೋಡಿ ಲಿಂಗಪೂಜೆಯಾಶೆ ಅಳಿಯಿತು
ಹಾಡಿ ಹಾಡಿ ಹರುಷದಲ್ಲಿ ಮನವು ಮುಳುಗಿತು

ಆದರೇನು, ಮರಳಿ ಮನವು ಶಾಂತವಾಗದೆ
ತನ್ನ ತಾನೆ ತಿಳಿದು ಹೊಳೆದು ಬಗೆಯಿತಿಂತದು :
ನಾಡ ಹೊಳೆಯ ನೀರು ನಾಡಿಗೆನಿತು ಇಲ್ಲದೆ
ಓಡುತಿಹುದಿದೆಂದು ಮನವು ಮರುಗಿತಿರದೆ !

# ಕನಕಲತೆ*

ಕಾಣಿಸಿತು ಕನಕಲತೆ ತಾನಾಗಿ ಶಿವನೆ,
ಮಾಣದಲೆ ಸ್ವೀಕರಿಸು ನೀನೊಲಿದಭವನೆ.

ಮುಗುಳೊಡೆದು ಹೂವಿಡಿದು ಬೆಳೆದಿಹುದು ಸುಳಿದೆಗೆದು
ಸೊಗವೀವ ಹಣ್ಣಾಗಿ ರಸವೀಯದಿರಬಹುದು
ಜಗವಿದನು ಮೆಚ್ಚಿಸುವ ರೂಹಿಲ್ಲವೇ ಹೇಳು
ನಾಗರದ ಹಾವಿಗಿಂ ಕೀಳೇನು ನೀ ಹೇಳು.

ಉಷೆಯಲ್ಲ ಉಮೆಯಲ್ಲ ಗಂಗೆ ತಾ ಮುನ್ನಲ್ಲ
ಉಸಿರಲ್ಲ ಮನಸಲ್ಲ ನಾನೆಂಬುದದು ಹೊಲ್ಲ
ರಸವಲ್ಲ ರೂಪಲ್ಲ ಕಂಪಲ್ಲ ನುಡಿಸಲ್ಲ
ಉಷೆಯುಸಿರ ರಸಗಳಿಗೆ ಮೂಲವದು ತಾಬಲ್ಲ

ಮಲ್ಲಿಗೆಯ ಕಂಪಿಲ್ಲ ಮಾಮರದ ಇಂಪಿಲ್ಲ
ಪಾದರಿಯ ಸೆಂಪಿಲ್ಲ ಮಾಧುರ್ಯ ತಾನಿಲ್ಲ
ಕಂಪಿಂಪು ಪೆಂಪುಗಳು ತಾನಿಲ್ಲದೊಡೆಯೇನು
ನೀನೊಲಿದು ಸಿರಿಮುಡಿಗೆ ಕಟ್ಟಿದರೆ ಸಾಲದೇನು?

ನಿಂಜಡೆಯು ಕಟ್ಟುವದಕಿಂ ಬೇರೆ ಸೈಪೇನು?
ಗಂಗೆಯಾ ತೀರದಲಿ ತಂಪಾಗಿ ಬೆಳೆದೇನು
ಚಂದಿರನ ಬೆಳಗಿನಲಿ ಚಂದಾಗಿ ಹೊಳೆದೇನು
ಇಂದುಧರ, ಕಾಪಿಡಲು ಕೃಪೆಯಿಂದ ಸೂಡಿದನು.

---

* ಕಳ್ಳಿಯ ಮೇಲೆ ಹೊಂಬಣ್ಣದಿಂದ ಹಬ್ಬಿದ 'ಅಂತರ ಗಂಗೆ' ಎಂಬ ಬಳ್ಳಿಯನು ನೋಡಿ ಇಂದ್ರಿಯೇಂದ್ರಿಗಳೆಂಬ ಕಳ್ಳಿಯ ಮೇಲೆ ಹಬ್ಬಿದ 'ಆಂತರಾತ್ಮ'ನನ್ನು 'ಹೊಂಬಳ್ಳಿ'ಯನ್ನಾಗಿಮಾಡಿ ಹಾಡಿದುದು.

# ನಾಲ್ವತ್ತು (ಪ)ವಾಡ ?

ನಾಲ್ವತ್ತುವಾಡಕ್ಕೆ ಬಂದಿಂದು ನಿಟ್ಟಿಸಲ್
ಅಲ್ಲೊಮ್ಮೆ ನೆಲಸಿರ್ದ ಶರಣ ಶ್ರೇಷ್ಠನಾದ
ವೀರೇಶವರ್ಯನಾ - ಮಠವದನು ಕಂಡುಮನ
ಮಾರಾಂತು ನಿಂತಿತ್ತೈ ಸಮ್ಮುದವ ತಾಳಿತ್ತೈ !

ಬಿಜ್ಜಳನ ಕಗ್ಗೊಲೆಯ ಕೈಕೊಂಡ ಮೂವರೊಳ್
ಒಬ್ಬನಹ ಬೊಮ್ಮಣ್ಣ ವಂಶಜರು ತಾವಾದ
ನಾಲ್ವತ್ತು ವಾಡದಾ ದೇಸಾಯ್ ದೊರೆಗಳವರ್
ಸಲ್ಲಿಸಿದ ಸೇವೆಯಿಂ ಹೃದಯುಕಾಯ್ತಾಲ್ಹಾದ.

ಕೊನೆಯಲ್ಲಿ ನಡೆದಿರ್ದ ಕ್ರಾಂತಿಯಂ ನಿರುಕಿಸದೆ
ಕಲ್ಯಾಣವಂ ಬಿಟ್ಟು ಬಂದಿರ್ದ ಬಸವಣ್ಣ,
ಕಲ್ಲು ಬಸವಣ್ಣಂಗೆ ಹುಲ್ಲನ್ನು ತಿನಿಸುತ್ತ
ನಾಲ್ವತ್ತನೆಯ ಪವಾಡವಂ ಮೆರೆದಿಹನಣ್ಣ ;

ಅದು ಕಾರಣದಿಂದೀ ಗ್ರಾಮಕ್ಕನಂತರಂ
ನಾಲ್ವತ್ತುವಾಡೆಂದು ಪೆಸರಾಯ್ತು ನಾಡೊಳಗೆ
ಇದರ ದಿಟವಾದ ಪೆಸರು "ನಾಲ್ವತ್ತು ಪವಾಡ"
ಎಂದಿದನು ತಿಳಿದಾಗ ಮುದವಾಯ್ತು ಮನದೊಳಗೆ

# ನಿನಗಾಗಿ ನವೆಯುವೆನು

ನಾನೆಂದು ನಿನ್ನೊಡನೆ ಒಂದಾಗಿ ನಲಿಯುವೆನು,
ನೀನೆ ಪ್ರಾಣವನುದಿನ ನಿನಗಾಗಿ ನವೆಯುವೆನು.

ಪವಡಿಸುವ ವೇಳೆಯಲಿ ತಳಿರಡಿಯ ನೆನೆಯುವೆನು
ಬ್ರಾಹ್ಮೀ ಮುಹೂರ್ತದಲಿ ನಾಮವಂ ಸ್ಮರಿಸುವೆನು
ಅಭ್ಯಾಸ ಕಾಲದಲಿ ಕೀರ್ತಿಯಂ ಪಾಡುವೆನು
ಅರ್ಚಿಸುವ ಸಮಯದಲಿ ಮಂತ್ರವಂ ಜಪಿಸುವೆನು.

ಅರ್ಪಣದ ಹೊತ್ತಿನಲಿ ಮೊದಲು ತುತ್ತದು ನಿನಗೆ
ಅಲಂಕರಿಸಿಕೊಳ್ಳುವೊಡವೆಯದು ಮೊದಲು ನಿನಗೆ
ಆಡುತಿಹ ಆಟವದು ಮೊದಲು ಮೀಸಲು ನಿನಗೆ
ನೋಡುತಿಹ ನೋಟದಲಿ ನೀನೆ ತೋರುವೆ ಯೆನಗೆ

ಕಾಣುತಿಹ ಕಣ್ಗಳಲಿ ರೂಪಾಗಿ ಕುಳಿತಿರುವೆ
ಸೇವಿಸುವ ರಸನೆಯಲಿ ರಸವಾಗಿ ನೆಲಸಿರುವೆ
ಕೇಳುತಿಹ ಕಿವಿಗಳಲಿ ಝೇಂಕಾರವಾಗಿರುವೆ
ನೆನೆಯುತಿಹ ಮನಸಿನಲಿ ಓಂಕಾರವಾಗಿರುವೆ.

ನೀನೆನ್ನ ನಾಲಗೆಗೆ ದಿಟವಾಗಿ ಸವಿಜೇನು
ನೀನೆನ್ನ ಕರ್ಣಕ್ಕೆ ಕಲರವದ ಸುರಗಾನ
ನೀನೆನ್ನ ಕಣ್ಣಿಂಗೆ ಕಲೆಯುಳ್ಳ ಸಿಂಗಾರ
ನೀನೆನ್ನ ಹೃದಯಕ್ಕೆ ಚಲುವುಳ್ಳ ಬಂಗಾರ.

## ರನ್ನ ಚುಕ್ಕಿ

ವರ್ಣಂಗಳೊಳಗೆನಗೆ 'ಸುವರ್ಣ'ವು ನೀನಯ್ಯ
ಗಂಧಂಗಳೊಳಗೆ 'ಶ್ರೀಗಂಧ' ನೀನೇ ಅಯ್ಯ
ಮೋದಕಂಗಳೊಳಗೇ ಸಕ್ಕರೆಯು ನೀನಯ್ಯ
ಅಕರಂಗಳೊಳಗೋಂಕಾರ ನೀನೆನಗಯ್ಯ

ನಿನ್ನಡಿಗೆ ಶರಣೆನುವೆ ನೀನೊಲಿಯೆ ನಾನಲಿವೆ
ತಳುವೇಕೆ ತೋರಯ್ಯ ತೆಗೆದಪ್ಪಿ ನಲಿಸಯ್ಯ
ತಾಳೆ ನಿನ್ನಯ ವಿರಹ ಬಾಳವೆನ್ನಯ ಹರಣ
ನಿನ್ನನೇ ಬಯಸುವೆನು ಬೇಗದಲಿ ಬಾರಯ್ಯ.

ನೀನೆನ್ನ ಗತಿಮತಿಯು ನೀನೆನ್ನ ಮನಶೃತಿಯು
ನೀನೆನ್ನ ಸಿರಿಸೊಗವು ನೀನೆನ್ನ ಚಿರಯುಗವು
ನಾನೆಂದು ನಿನ್ನೊಡನೆ ಒಂದಾಗಿ ನಲಿಯುವೆನು
ನೀನೆಂದು ಬರುವಿಯೋ ನಿನಗಾಗಿ ನವೆಯುವೆನು.

# ಹೃದಯ ಗೀತೆ

ಚೆಲ್ಲು ಬೆಳಗಿನ ಬೆಳಕು
ಚೆಲ್ಲು ಚಲುವಿನ ಹೊಳಕು
ಸಲ್ಲದಿಹ ಕತ್ತಲೆಯು ಕವಿಯುತಿಹುದು
ಸುರಿಸು ಕರುಳಿನ ಕರುಣೆ
ಹರಿಸು ಎನ್ನಯ ಬವಣೆ
ಬೆರಸು ನಿನ್ನಯ ಚರಣ ಕಮಲದೊಳಗೆ

ಕಾಂತಿ ಕೇಂದ್ರಂ ನೀನು
ಶಾಂತಿ ಸಾಂದ್ರಂ ನೀನು
ಭ್ರಾಂತಿ ಭಾವವ ಬಿಡಿಸು ಜಗದ್ಗುರುವೆ
ಆರ್ಯವರ್ಯಂ ನೀನು
ಧೈರ್ಯಶೀಲಂ ನೀನು
ಸೂರ್ಯ ಸಿಂಹಾಸನದ ಕಲ್ಪತರುವೆ

ನಿನ್ನ ಬಳಿಯಲಿ ನಿಂದು
ಹೃದಯ ಗೀತೆಯನೊಂದು
ಹಾಡಿ ಬೇಡುವೆ ನಾನು ಕರುಣಸಿಂಧು
ನಿರ್ಮಲತೆಯಲಿ ಮಿಂದು
ಸನ್ಮತಿಯೊಳಗೆ ಸಂದು
ಸಮ್ಮುದದಿ ಬೇಡುವೆನ್ ಕರುಣಿಸಿಂದು

ಚಂದ್ರಗುಂಡರೆ ನೀವು
ಚಂದ್ರಕೀರ್ತಿಯ ಮೀರಿ
ಚಂದ್ರಶಾಂತಿಯ ಸಾರಿ ಮೆರೆದಿರಂದು,

ರಾಜವಟ್ಟೆಯು ನೆಲದಿ
ವೀರಭದ್ರನ ನಿಲಿಸಿ
ಪೂಜ್ಯತೆಯು ನೀವ್ ಬೀರಿ ಮೆರೆದಿರಿಂದು

ನಿನಗೆ ತೆಂಗಿನ ಮರವು
ತಾನೆ ಬಾಗಿತು ದಿಟವು
ದೇವ ದಾಸನು ನಿನಗೆ ಶಿಷ್ಯನಯ್ಯ.
ಮಿಗಿಲು ನಿನ್ನಯ ಮಹಿಮೆ
ಮಿಗಿಲು ನಿನ್ನಯ ಹಿರಿಮೆ
ಮುಗಿವೆ ನಿನ್ನಯ ಪದಕೆ ಕರುಣಿಸಯ್ಯ.

ಎನ್ನ ಹೃದಯವೆ ತಂತಿ
ಎನ್ನ ಕಾಯವೆ ಕಾಯಿ
ಕೊರಳು ದಂಡಿಗೆ, ಮಿಡಿದು ನುಡಿಸು ಪ್ರಭುವೆ,
ಹೃದಯ ಹಂಬಲ ಹರಿಸು
ಕಾಯಕೇ ಬಲ ಬರಿಸು
ಆತ್ಮ ದುರ್ಬಲವಳಿಸು ಜಗದ್ಗುರುವೆ

ಶೈಲಿಯು ಸೊಗಸದಿಲ್ಲ
ಶೀಲದ ಸೊಬಗದಿಲ್ಲ
ಶಬುದ ಸಿರಿಯದು ಮುನ್ನ ತಾನಿಲ್ಲ
ನಾನುಡಿದುದೇ ಕಾವ್ಯ
ನೀನೊಲಿದುದೇ ದಿವ್ಯ
ನೀನೆನಗೆ ತಳುವದಲೆ ಒಲಿಯೆ ಎಲ್ಲ

ಇದುವೆ ಕೊರಳಿನ ಗಾಥ
ಇದುವೆ ಕರುಳಿನ ಗೀತ
ಇದನೆ ಕರುಣಿಸಿ ಕಾಪಿಡಯ್ಯ ನಾಥ!

# ಮಿಗಿಲು

ಇಳೆಯು ತಾಳ್ಮೆಗೆ ತವರು
ಇಳೆಯುಗಿಂತಲು ನರನ
ಮೆಯ್ಯ ತಾಳ್ಮೆಯು ಮಿಗಿಲು.

ಜಲಕೆ ಶೀತವು ಪ್ರಕೃತಿ
ಜಲದಕಿಂತಲು ಮಹತಿ
ಮನವು ತಳೆದಿಹ ಶಾಂತಿ.

ರವಿಯು ಲೋಕಕೆ ಬೆಳಕು
ರವಿಯುಗಿಂತಲು ಬೆಳಕು
ಮತಿಯು ತೋರುವ ಹೊಳಕು.

ಗಾಳಿ ಸ್ಪರ್ಶವು ಹೆಚ್ಚು
ಗಾಳಿಗಿಂತಲು ಹೆಚ್ಚು
ಹೃದಯ ತಾಳುವ ಮೆಚ್ಚು.

ಮುಗಿಲ ಶುದ್ಧಿಯು ಮಿಗಿಲು
ಮುಗಿಲಗಿಂತಲು ಮೇಲು
ಆತ್ಮ ಶುದ್ಧಿಯ ಹೊನಲು.

# ಬೆಳಗಲಿ !

ಸೂರ್ಯ ಸಿಂಹಾಸನವು ಉದಿಸಲಿ
ಆರ್ಯ ಭೂಮಿಯುಮೇಲೆ ಬೆಳಗಲಿ

ನಡೆಯ ಬೆಳಗನು ಇಳೆಗೆ ತೋರಲಿ
ನುಡಿಯ ಬೆಡಗನು ಬಿಡದೆ ಹರಡಲಿ
ಜಗಕೆ ನಂದಾದೀಪವಾಗಲಿ
ಜನಕೆ ಆನಂದವನು ಬೀರಲಿ

ಮೋಹ ಕಾಳ್ಗತ್ತಲೆಯು ಕಳೆಯಲಿ
ಲೋಭ ಬತ್ತಿಯ ಹತ್ತಿ ಉರಿಯಲಿ
ರಾಗ ತೈಲವ ಹೀರಿ ಕುಡಿಯಲಿ
ಯೋಗ ಮಾರ್ಗವ ತೋರಿ ನಲಿಯಲಿ

ಜಾತಿ ಭೂತವು ಓಡಿಹೋಗಲಿ
ಜ್ಯೋತಿ ವ್ಯಾಪ್ತಿಯು ಮೂಡಿ ಬೆಳೆಯಲಿ
ನೀತಿ ರೀತಿಗಳೆದೆಗಳಾಳಲಿ
ಸಂಸ್ಕೃತಿಯು ಪ್ರಗತಿಯನು ಸಾರಲಿ

ಕೀರ್ತಿ ಕಿರಣವನಿರದೆ ಹರಹಲಿ
ಸ್ಫೂರ್ತಿಸ್ಫುರಣವನೆದೆಗೆ ನೀಡಲಿ
ಆರ್ತಿಬಳ್ಳಿಗೆ ಚಿಗುರನೀಯಲಿ
ಮೂರ್ತಿರೂಪವ ತೋರಿ ಬೆಳಗಲಿ

ನೀಡುಮಾಮಿಡಿ ಲೀಲೆ ಮೊಳಗಲಿ
ನೀಡುಗಾಲದಿ ಬಾಳಿ ಬೆಳಗಲಿ
ಸೂರ್ಯಸಿಂಹಾಸನವು ಏರಲಿ
ಆರ್ಯ ಭೂಮಿಯ ಮೇಲೆ ಬೆಳಗಲಿ

# ಮಾತಿನಮನೆ

ಮಾತಿನ ಮನೆಯ ಮಾಡಿ
ಕೃತಿದೂಡಿ ಕೃತಕಗೂಡಿ
ನೀತಿಯನು ಬೋಧಿಸುತ ರೀತಿಯನು ಕೈಬಿಡುತ
ಮತಿಗೆಟ್ಟು ಬಾಳಿಹುದು ಮತಿವಂತಿಕೆಯ ನಟಿಸಿ !

ಜನರ ಮೌಢ್ಯತೆಯ ಮೇ-
ಲನುಭವದ ಸೋಗನು
ಹಾಕಿ ಕುಣಿಯುತ್ತಿಹುದು ಕಾಷಾಯವನು ಧರಿಸಿ
ಸಾಕಿ ಸಲುಹುತ್ತಿಹುದು ಕಾಯವನು ದಿಟವೆನಿಸಿ

ಸಮತೆಯನು ತೋರುತ್ತ
ಕುಮತಿಯನು ತಾಳುತ್ತ
ವಿಮತದಲಿ ಬಾಳುತ್ತ ಕಣ್ಬಿಡುತ ಕುಳಿತಿಹುದು
ಗುಪಿತ ಪ್ರಪಂಚವಿದು ಗುಪಿತಪಾತಕವಿದು.

ಭಕ್ತರನು ಭ್ರಮಿಸುತ್ತ
ಪಂಥಗಳ ಕಟ್ಟುತ್ತ
ಸ್ವಾರ್ಥವಂ ಸಾಧಿಸುತ ಸೌಖ್ಯಮಂ ಬೆದಕುವುದು;
ಭಾವುಕರ ಮೋಸದಲಿ ಮುಳುಗಿಸುತ ತೇಲಿಸುತ !

ಉಪಕೃತಿಯ ನೆಪದಲ್ಲಿ
ಅಪಕೃತಿಯ ನೆಸಗುವುದು
ಸುಪಥವನು ಅನ್ಯರಿಗೆ ತೋರಿಸುವ ನಟನೆಯಲಿ
ಅಪಥದಲಿ ತಾ ಸಾಗಿಹುದು ಕುರುಡನಂದದಲಿ

ಸಮಯವಂ ಸಾಧಿಸುತ
ಸರಿಕರಂ ಭೇದಿಸುತ
ಸಮಗಾಣದಲೆ ಸ್ವಂತ ಕೀರ್ತಿಯಂ ಗಳಿಸಲ್ಕೆ
ಶ್ರಮಿಸದಲೆ ಮಾತಿನಾ ಮನೆಯ ಕಟ್ಟುವುದಲ್ತೆ !

ಮನವನ್ನು ತಿದ್ದದಲೆ
ಮೈಯನ್ನು ತಿದ್ದಿಯೇಂ
ಮತಿಯನ್ನು ತೊಳೆಯದಲೆ ನೀತಿಯನು ಹೇಳಿಯೇಂ
ಮನವನ್ನು ಕಟ್ಟದಲೆ ಮಾತನ್ನು ಕಟ್ಟಿಯೇಂ ?

# ಒಂದೆ *

ಬಾನೊಳು ಸಾಸಿರ ಚುಕ್ಕೆಗಳು
 ಮೂಡುತ ಮಿನುಗುವವು ;
ಇರುಳಿಗೆ ಬೆಳಗನು ತರುವವನೊಬ್ಬನೆ
 ಚನ್ನಿಗ ಚಂದಿರನು.

ದೇಹಿಗೆ ಎನಿತೋ ಕರಣಗಳು
 ಬಲಿಯುತ ಬೆಳದಿಹವು ;
ಬಾಳಿಗೆ ಬೆಳಗನು ತರುವುದು ನಿರ್ಮಳ
 ಬುದ್ಧಿಯು ತಾನೊಂದೇ !

ಬುದ್ಧಿಗೆ ಬೆಳಗನು ಬೀರಲ್ಕೆ
 ವರ್ಣಂಗಳಪಾರ ;
ಆತ್ಮಗೆ ಚಿರಶಾಂತಿಯ ನೀವುದು
 ಒಂದೇ ಓಂಕಾರ.

---

* 'ಕುವೆಂಪು' ಅವರ "ಮನಸ್ಸು-ಹೃದಯ" ಎಂಬ ಕವನವನ್ನು ಓದಿ ಬರೆದುದು.

# ಕರದಿಷ್ಟವೇ !

೧

ನಿತ್ಯವು ಪೂಜೆಯ ಫುರುಳಾಗಿರುವೆ
ನಿನ್ನಂ ಕರುಣಿಸಿದವನಾರು,
ನನ್ನಿಯ ಚನ್ನಿಗನವನಾರು ?

ಕಣ್ಣಿನ ಪುಣ್ಯವು ಕರುಳಿನ ಜೊನ್ನವು
ಸೈಪಿನ ಸೋನೆಯು ಸೊಬಗಿನ ಸುಗ್ಗಿಯು
ಭಾವದ ಭಾಗ್ಯವು ನೀನಾಗಿರುವೆ
ನಿನ್ನನು ತೊಟ್ಟಿಹ ಪುಣ್ಯನದಾರು ?
ನನ್ನಯ ಬಾಳಿನ ದಂದುಗ ನೀಗಲು
ಕರುಣಿಸಿ ಕೊಟ್ಟಿಹನು ;
ಕಣ್ಣಿಗೆ ನಿನ್ನಯ ಚಲುವಂ ತೋರಲು
ಕರದೊಳಗಿಟ್ಟಿಹನು.

ಕಷ್ಟವ ಕಳೆಯುತಲಿಷ್ಟವ ತೋರಿಸಿ
ತುಷ್ಟಿಯ ನೀಡುತ ಪುಷ್ಟನ ಮಾಡಲು
ಶಿಷ್ಟನು ಶ್ರೀಗುರು ನಿನ್ನನು ಲಿಂಗವೆ
ಕೊಟ್ಟಿಹನವನು ಬಣ್ಣಿಸಲಳವೆ ?
ನಿತ್ಯವು ನಿನ್ನಯ ನೇಹದಿ ಪೂಜಿಸಿ
ನಿನ್ನನು ನೋಡುವೆನು ;
ಸತ್ಯದ ಸುಖವಂ ತಪ್ಪದೆ ಕೊಡುನೀ
ನೆನ್ನುತ ಪಾಡುವೆನು.

೨

ಪ್ರಾಣಕೆ ಪ್ರಾಣಂ ನೀನಾಗಿರುವೆ
ನಿನ್ನಂ ಕರುಣಿಸಿದವನಾರು,
ನನ್ನಿಯು ಚನ್ನಿಗನವನಾರು?

ಬುದ್ಧಿಯು ಕಣ್ಣಂ ಅರಳಿಸಿ ನೋಡುವೆ
ಶುದ್ಧಿಯ ಜಲವಂ ಮಜ್ಜನ ಮಾಡುವೆ
ಮುದ್ದಿನ ಹೂವಂ ಮುದ್ದಿಸಿ ಸೂಡುವೆ
ನಿನ್ನಂ ಸ್ವಾಯುತ ಮಾಡಿದನಾರು?
ಪ್ರಾಣದ ಪ್ರಕೃತಿಯು ಕಳೆಯಲು ನೀನೇ
ಹೊಂಗಿರಣಗಳೈಸೆ;
ಪ್ರಾಣದ ಮಹತಿಯು ಬೀರಲು ನೀನೇ
ತಂಗದಿರೆಂಬಾಸೆ.

೩

ಭಾವದ ಬೆಳಸದು ನೀನಾಗಿರುವೆ
ನಿನ್ನಂ ಕರುಣಿಸಿದವನಾರು,
ನನ್ನಿಯು ಚನ್ನಿಗನವನಾರು?

ಮುನ್ನಕೆ ಮುನ್ನನು ನೀನಾಗಿರುತಿಹೆ
ವರ್ಣಕೆ ವರ್ಣನು ನೀನಾಗಿರುತಿಹೆ
ಪೂರ್ಣಕೆ ಪೂರ್ಣನು ನೀನಾಗಿರುತಿಹೆ
ನಿನ್ನನು ಸನ್ನಿಹಿತನೆನಿಸಿದನಾರು?
ಭಾವಾತೀತನು ಆದರು ಬೇಡುವೆ

ಗುರುವಿನ ಆಳಾಗಿ ;
ದೇವಾತೀತನು ಆದರು ಕೂಡುವೆ
ನಿನ್ನೊಳು ಮರುಳಾಗಿ ;

೪

ನಿತ್ಯವು ಪೂಜೆಯ ಪುರುಳಾಗಿರುವೆ
ನಿನ್ನಯ ಕರುಣಿಸಿದವನಾರು,
ನನ್ನಿಯ ಚನ್ನಿಗನವನಾರು ?

ನಿನ್ನನು ಕೊಟ್ಟಿಹ ಶ್ರೀಗುರು ಮಾನ್ಯನು
ನಿನ್ನನು ತೊಟ್ಟಿಹ ನಾನೇ ಧನ್ಯನು
ಅಂಗವ ಸುಟ್ಟಿಹನವನೇ ಚನ್ನನು
ಮಂಗಳ ಕೊಟ್ಟಿಹನವನೇ ರನ್ನನು
ಭಾವಕೆ ಚಿರಸುಖ ನಿಧಿಯಂ ಕೊಟ್ಟಿಹ
ಗುರುವನೆ ಸಾರುವೆನು ;
ಭಾವಸಮಾಧಿಯ ಗುಟ್ಟಂ ಪೇಳಿಹ
ಗುರುವನೆ ಸೇರುವೆನು.

# ನೀನೊಲಿಯೆ ನೀನುಂಟು

ದೇಹವಿದು ದಿನದಿನದಿ ಕೊರಗುತಿದೆ ಕರಗುತಿದೆ
ನೇಹದಲಿ ನಲಿದುಲಿದು ಕರಗಿದರೆ ಕರಗಲಿಂದೆ
ಕರಿಬಸವ ಸದ್ಗುರುವೆ ನಿನ್ನಿಂದ ಬೆಳದಿರ್ದ
ಸೂರ್ಯಸಿಂಹಾಸನದ ಸೇವೆ ಸಾಗಲಿದರಿಂದೆ

ತುಂಬುತಿದೆ ತುಳುಕುತಿದೆ; ಎದೆಗಡಲು ತೂರುತಿದೆ
ನಂಬುತಿದೆ ನಚ್ಚುತಿದೆ ನಿತ್ಯದಲಿ ನಲಿಯುತಿದೆ
ಕರಿಬಸವ ರಾಜೇಂದ್ರ, ಸವಿಗನಸ ಸವಿಯುತಿದೆ
ಕರಿಗೊಂಡು ನಿಮ್ಮೊಳಗೆ ಕೂಡಲ್ಕೆ ಬಗೆಯುತಿದೆ;

ಬೆಳಗುತಿದೆ ತೊಳಗುತಿದೆ ತಿಳಿಸೊಡಗು ತಾನಾಗಿ
ಅಲುಗದಲೆ ನಲುಗದಲೆ ಚಿತ್ಸೂರ್ಯ ನಿನಗಾಗಿ
ಅರಿದರಿದು ಒರೆದೊರೆದು ಅನುಭವದ ಬೆಳಗಾಗಿ
ನೆರೆದಿರಲು ಬಯಸುತಿದೆ ನಿಮ್ಮಡಿಯ ಕಿರಣಾಗಿ!

ಹೊಮ್ಮುತಿದೆ ಹೊಮ್ಮುತಿದೆ ಹೃದಯದಾ ಹಿರಿಹೊನಲು
ನಮ್ಮದಿದೆ ನಮ್ಮದಿದೆ ದುರಹಂಕೃತಿಯ ಮಳಲು
ಚಿಮ್ಮುತಿದೆ ಚಿಮ್ಮುತಿದೆ ಸರಸತಿಯ ಚಿಲುಮೆಯದು
ಹಿಮ್ಮೆಟ್ಟಿಯೋಡುತಿದೆ ಹರಿಸತಿಯ ಒಲುಮೆಯಿದು;

ಕರಿಬಸವ ಕರುಣಾಳು ಕರವೊಡ್ಡಿ ಬೇಡುವೆನು
ಸರಸತಿಯ ಹರಿಸತಿಯ ಹಂಗವನು ಹರಿದೊಗೆಯೊ
ಅವರೊಲಿದರೇನುಂಟು? ನೀನೊಲಿಯೆ ನೀನುಂಟು
ನೀನೊಲಿಯೆ ಪರವುಂಟು ಅವರೊಲಿಯೆ ಇಳೆಗಂಟು.

# ಪಂಚಾಚಾರ್ಯರು

ಪಂಚಾಚಾರ್ಯರ ಹಿರಿಮೆಯ ಕೇಳಿರಿ ನಿಜವನ್ನೊರೆಯುವೆವು
ವಂಚನೆಯಿಲ್ಲದೆ ಸಂಚನೆಗೆಳಸದೆ ನಡೆದುದನುಸುರುವೆವು.
ಕನ್ನಡ ಮನೆಯೊಳು ದೀಪವನಂಟಿಸಿದರು ಶಿವಶರಣರು
ಕನ್ನಡ ನುಡಿ ತಾಯೂಳಿಗವನೊಲಿದು ನೆರೆದವರೆಸಗಿದರು.
ಪಂಚಾಚಾರ್ಯರು ಉತ್ತರ ಭಾರತ ದೇಶಕೆ ಸಾಗಿದರು
ಮಿಂಚಿನ ವೇಗದಿ ಮಿರಗುತ ಚಂದ್ರನ ತೆರದಲಿ ಬೆಳಗಿಹರು
ಸತ್ಯಸದಾಚಾರದುತ್ತಮ ಬೀಜವುತ್ತರ ದೇಶದೊಳು
ಬಿತ್ತುತ ಹುಲುಸಿನ ಬೆಳೆಯನು ಬೆಳೆದರು ತಾವ್ ಸಂತೋಷದೊಳು
ಉತ್ತರದವರಿಗೆ ಉತ್ತಮ ಉಣಿಸಿನ ರುಚಿಯನು ಕೊಟ್ಟಿಹರು
ಉತ್ತರ ಮಾರ್ಗದ ಉತ್ಕರ ಸುಖದೊಳಗವರನು ತಣಿಸಿಹರು
ಉತ್ತರ ದೇಶದೊಳೆಲ್ಲಾ ಷಟ್ಸ್ಥಲ ತತ್ವವ ಹಬ್ಬಿಸಿದರ್
ಉತ್ತರ ದೇಶದ ರಾಜರುಗಳ ತಾವ್ ಶಿಷ್ಯರನಾಗಿಸಿದರ್
ಮೆಚ್ಚಿದ ರಾಜರು ಇಚ್ಛೆಗೆ ಬಂದುದುನೆಲ್ಲವ ಭಕ್ತಿಯಲಿ
ಹೆಚ್ಚುತ ಹಿಗ್ಗುತ ಪಂಚಾಚಾರ್ಯರಿಗರ್ಪಿಸಿದರಿಳೆಯಲಿ
ಭಾರತ ದೇಶದ ಜನರನು ಉದ್ಧರಿಸಿದರವರಾಚಾರ್ಯರ್
ಭಾರತ ಭೂಮಿಯ ಪಾವನಗೈದರು ಪಂಚಾಚಾರ್ಯರವರ್
ಸಂಸ್ಕೃತ ಭಾಷೆಯ ಸೇವೆಯ ಮಾಡಲು ಭಾಷ್ಯವ ಬರೆದಿಹರು
ಸಂಸ್ಕೃತರೊಳಗೆ ಸುಸಂಸ್ಕೃತರೆನಿಸುತ ಭುವಿಯೊಳು ಬಾಳಿಹರು.
ಕಾಶಿಯೊಳಗೊಂದು ಪೀಠವ ಸ್ಥಾಪಿಸಿದರು ವಿಶ್ವಾರಾಧ್ಯರು
ವಿಶ್ವೇಶ್ವರನಾ ಬಲದಿಂ ವಿಶ್ವದಿ ಹೆಸರನು ಪಡೆದಿಹರು
ಹಿಮವತ್ ಕೇದಾರದೊಳಗೆ ಏಕೋರಾಮಾರಾಧ್ಯರು
ಹಿರಿಮೆಯ ಪೀಠವ ಸ್ಥಾಪಿಸಿ ಭಾರತ ದೇಶದಿ ಮೆರೆದಿಹರು
ಸಿಂಹಳದ್ವೀಪದಿ ಸುಂದರ ಮಠವನು ನಿರ್ಮಿಸಿ ನಲಿದಿಹರು
ಸಿಂಹಳ ರಾಜ್ಯದಿ ಲಿಂಗವ ಸ್ಥಾಪಿಸಿ ಶೈವವ ನಿಲಿಸಿಹರು

ಆಂಧ್ರದಿ ದ್ರಾವಿಡ ದೇಶದಿ ಮಠಗಳ ಕಟ್ಟಿಸಿ ಬೆಳಸಿದರು
ಮಧ್ಯಪ್ರದೇಶ ಕಾಶ್ಮೀರ್ ನೇಪಾಳಗಳಲಿ ನೆಲಸಿಹರು.
ಭಾರತದೇಶದಿ ಷಟ್ಸ್ಥಲಧ್ವಜವ ಹಾರಿಸಿದವರಾರು,
ಭಾರತದೇಶದಿ ವೀರಸುಶೈವವ ಹಬ್ಬಿಸಿದವರಾರು ?
ಶ್ರೀಗಿರಿಯೊಳು ರವಿಪೀಠವ ರಚಿಸಿದರು ಪಂಡಿತಾಚಾರ್ಯರ್
ನೀಗಿದರಸುಗಳನಲ್ಲವು ಮಾದೇವಿಯು ಮುಂತಾದವರ್
ಕಲಿಯುಗದೊಳಗೇ ಶ್ರೀಗಿರಿ ಕ್ಷೇತ್ರವು ಮುಕ್ತಿಯ ಮಂದಿರವು
ನಲಿಯುತ ನಾಡಿನ ಜನಗಳೆ ಸಾಗಿರಿ ಶ್ರೀಶೈಲಕೆ ನೀವು
ಕನ್ನಡ ನಾಡೊಳು ರಂಭಾಪುರಿ ಯುಜ್ಜಯನಿಯು ಮೆರೆದಿಹವು.
ಕನ್ನಡನಾಡಿನ ಜನರನು ಉದ್ಧರಿಸಲು ಬೆಳಗುತ್ತಿಹವು
ಕನ್ನಡನಾಡೊಳು ಶಾಖಾಮಠಗಳ ರಚಿಸುತ ರಾಜಿಪವು
ಕನ್ನಡನಾಡಿಗೆ ತತ್ವದ ಬೆಳೆಯನು ಬೆಳೆಸುತ ಉಣಿಸಿಹವು
ಪಂಚಾಚಾರ್ಯರೆ ಪಂಚಪ್ರಣವ ಸುರೂಪರು ತತ್ವದಲಿ
ಪಂಚಾಚಾರ್ಯರೆ ಪಂಚಪ್ರಾಣ ಸುರೂಪರು ಸತ್ಯದಲಿ
ಬತ್ತಿದ ಹೃದಯದಿ ತತ್ವದ ರಸವನು ತುಂಬಿದರೊಲವಿಂದ
ಕತ್ತಲ ಮನೆಯಲಿ ಜ್ಞಾನದ ಬೆಳಗನು ಬಿಂಬಿಸಿದರೊಲವಿಂದ
ಪಂಚಾಚಾರ್ಯರೆ ವೀರಸುಶೈವರ ಜೀವನ ಸರ್ವಸ್ವ
ಪಂಚಾಚಾರ್ಯರೆ ಭಾರತ ಸಂಸ್ಕೃತಿ ಭಾಗ್ಯದ ಸರ್ವಸ್ವ
ಅವರ ಮಹಿಮೆಯಲಿ ಅವರ ಹಿರಿಮೆಯಲಿ ನಲಿಯಿತು ಜನತೆಯದು
ಅವರ ಕರುಣೆಯಲಿ ಅವರ ಚರಣದಲಿ ಬಾಳಿತು ಜಗವಿದು.
ಷಟ್ಸ್ಥಲ ಚಿಮ್ಮಿತು ಪಂಚಾಚಾರ್ಯರ ಹೃದಯದ ಚಿಲುಮೆಯಲಿ
ಅಷ್ಟಾವರಣವು ಹೊಮ್ಮಿತವರುಗಳ ಜ್ಞಾನದ ಕುಲುಮೆಯಲಿ
ಪಂಚಾಚಾರವ ಶೋಧಿಸಿ ಮೆರೆದರು ಮಹಿಯೊಳು ಪಂಚಾಚಾರ್ಯರವರ್
ಪಂಚಬ್ರಹ್ಮರ ಸಾಧಿಸಿ ಬೆರೆದರು ಅವರೊಳು ಪಂಚಾಚಾರ್ಯರವರ್
ಆಗಮತತ್ವವ ಬೆಳಕಿಗೆ ತಂದರು ಪಂಚಾಚಾರ್ಯರವರ್

ಮಾಡುವ ಏಳಿರಿ ಪಂಚಾಚಾರ್ಯರ ಪಾದಕೆ ಪೂಜೆಯನು
ಹಾಡುವ ಬನ್ನಿರಿ ಪಂಚಾಚಾರ್ಯರ ಪಾವನ ಸ್ತೋತ್ರವನು
ಕೇಳುವ ಕೂಡಿರಿ ಪಂಚಾಚಾರ್ಯರ ಹೆಮ್ಮೆಯ ಕೀರ್ತಿಯನು
ಹೇಳುವ ಬನ್ನಿರಿ ಪಂಚಾಚಾರ್ಯರ ನಲ್ಮೆಯ ವಾರ್ತೆಯನು.
ಕತ್ತಿಯ ಹಿಡಿಯದೆ ತತ್ವಪ್ರಚಾರವ ಮಾಡಿದ ಮಹಿಮರವರ್
ಮೃತ್ಯುವನೆಣಿಸದೆ ಸತ್ಯವ ಸಾರಿದ ಜಗದ್ಗುರುಗಳವರ್

# ಭಕ್ತಿಯೌವನದಾಸೆ !

ಒಲುವಿನ ಪೂಜೆ ನಲುವಿನ ಪೂಜೆ
ನಲ್ಲನ ಪೂಜೆ ನಿತ್ಯದಿ ನಡೆಯುತಿದೆ,
ಚಲುವಿನ ಪರಿಯು ಗೆಲುವಿನ ಸಿರಿಯು
ಮಿಲನದ ಗುರಿಯು ತೋರದೆ ಕೊರಗುತಿದೆ.
　　ಲಿಂಗವೆ ನಿನ್ನ ಕೂಡುವುದೆಂದು,
　　ಲಿಂಗವೆ ನಿನ್ನೊಳಾಡುವುದೆಂದು ?

ಬಾನೊಳು ಚಿತ್ರ ಚಲಿಸುವದೇಕೆ
ಭುವಿಯೊಳು ನೀರು ಹರಿಯುವುದೇಕೆ
ಮನವಿದು ತಾನು ಮಿಡಿಯುವುದೇಕೆ
ಲಿಂಗವೆ ನೀನು ತಡೆದುದು ಏಕೆ ?

ಅಳಲಿದೆ ಮನವು ಬಳಲಿದೆ ಮನವು
ತೊಳಲಿದೆ ಮನವು ನೀರನೆ ನಿನಗಾಗಿ
ಸೊಲ್ಲದೆ ನುಡಿಯು ಸಲ್ಲದೆ ನಿನಗೆ
ಮೆಲ್ಲದೆ ಸೊಗವ ನಲ್ಲನೆ ನಿನಗಾಗಿ
　　ಲಿಂಗವೆ ನಿನ್ನ ಕೂಡುವುದೆಂದು
　　ಲಿಂಗವೆ ನಿನ್ನೊಳಾಡುವುದೆಂದು ?

ಕುಲೀನ ಯುವತಿ ಕೋರುವದೇನು
ಚಕೋರಹಕ್ಕಿ ಚಿಂತಿಪುದೇನು
ಬಯಲೊಳು ಮೀನು ಬಾಳುವುದೇನು
ಭಕ್ತಿಯು ಯುವತಿ ಬಯಸುವುದೇನು ?

ಕಾಯವು ನೀನೆ ಕರಣವು ನೀನೆ
ಭಾವವು ನೀನೆ ಸರ್ವಸ್ವವು ನೀನೆ

ಕಾಯ್ದಿದೆ ಬಸಿರು ಸುಯ್ದಿದೆ ಉಸಿರು
ನೆಯ್ದಿದೆ ಹೆಸರು ನಲ್ಲನೆ ನಿನಗಾಗಿ-
ಲಿಂಗವೆ ನಿನ್ನ ಕೂಡುವುದೆಂದು,
ಲಿಂಗವೆ ನಿನ್ನೊಳಾಡುವುದೆಂದು ?

ಮಾತಿಗೆ ನೀನು ನಿಲುಕುವೆ ಎಂದು
ಮನಸಿಗೆ ನೀನು ಸಿಲುಕುವೆ ಎಂದು ?
ನಮ್ಮಯ ಹೃದಯ ಕಲೆಯುವುದೆಂದು
ನಮ್ಮಯ ಪ್ರಣಯ ಫಲಿಸುವುದೆಂದು ?

ಕಾಣಲು ನಿನ್ನ ಕಾಯ್ದಿವೆ ಕಂಗಳು
ಕೇಳಲು ನಿನ್ನ ತೆರದಿವೆ ಕಿವಿಗಳು
ನುಡಿಸಲು ನಿನ್ನ ತೊದಲಿದೆ ಭಾಷೆ
ಬೆರಸಲು ಭಕ್ತಿಯೌವನದಾಸೆ-
ಲಿಂಗವೆ ನಿನ್ನ ಕೂಡುವುದೆಂದು,
ಲಿಂಗವೆ ನಿನ್ನೊಳಾಡುವುದೆಂದು ?

ಕಾಣಲು-ನನ್ನ ಪ್ರಾಣವೆ ಕಣ್ಣು
ಕೇಳಲು-ನನ್ನ ಮನವದು ಕರ್ಣ
ನುಡಿಸಲು ನಿನ್ನ-ಹೃದಯವೆ ವಾಣಿ
ಕೂಡಲು ನಿನ್ನ-ಜೀವವೆ ಪಾಣಿ-
ಲಿಂಗವೆ ನಿನ್ನ ಕೂಡುವುದೆಂದು,
ಲಿಂಗವೆ ನಿನ್ನೊಳಾಡುವುದೆಂದು ?
ಶ್ರೀ ನಿಡುಮಾಮಿಡಿ ಶ್ರೀಗಿರಿ ಪೀಠಾ-
ಧೀಶನು ಪೇಳಿದ ನೀ ಸ್ತುತಿಪಾಠ.

# ಓ ಶಿಷ್ಯ, ಕೇಳ್ ಭಾಷ್ಯ !

ಬಂದೆಯಾ ಬಾ ಬಳಿಗೆ ಓ ಶಿಷ್ಯ ಕೇಳ್ ಭಾಷ್ಯ
ನಿಂದೆಯಾ ನಿಲ್ಲೊಳಗೆ ಘನತೋಷ ಗುಣಪೋಷ್ಯ !

ಸಂಸೃತಿಯು ಸಾಕಾಗಿ ಸಂಸ್ಕೃತಿಯು ಬೇಕಾಗಿ
ಧ್ಯಾನಕ್ಕೆ ಮನಮುಸಗಿ ಧ್ಯೇಯಕ್ಕೆ ಮತಿಹೊಸಗಿ
ಪ್ರೇಮಕ್ಕೆ ಉರಿಯಿಕ್ಕಿ ನೇಮಕ್ಕೆ ಗುರಿಯಿಕ್ಕಿ
ಮನಸಿಂಗೆ ಅರಿವುಕ್ಕಿ ಕನಸಿಂಗೆ ಕಳೆಯುಕ್ಕಿ
ಬಂದೆಯಾ ಬಾ ಬಳಿಗೆ...............

ಹಿತವರಿಗೆ ತೊಡರಿಟ್ಟು ಸುತರರಿಗೆ ಸೊಡರಿಟ್ಟು
ಮಡದಿಗೇ ಮನೆಕೊಟ್ಟು ಮೃಡನಿಗೇ ಗುಡಿಬಿಟ್ಟು
ದೇಹಕ್ಕೆ ಉರಲಿಟ್ಟು ಮೋಹಕ್ಕೆ ಒರಲಿಟ್ಟು
ಬುದ್ಧಿಗೇ ದೃಢನಟ್ಟು ಶುದ್ಧಿಗೇ ಒಲವಿಟ್ಟು
ಬಂದೆಯಾ ಬಾ ಬಳಿಗೆ...............

ನೋಟಕ್ಕೆ ಕಣ್ಮುಚ್ಚಿ ಬೇಟಕ್ಕೆ ಮೆಯ್ಬಚ್ಚಿ
ಸುಳ್ಳಿಂಗೆ ಬಾಯ್ಮುಚ್ಚಿ ಸತ್ಯಕ್ಕೆ ಬಾಯ್ಬಿಚ್ಚಿ
ಕಾಕುನುಡಿಗಳ ಕೊಚ್ಚಿ ಲೋಕದಿರುವಿಗೆ ಬೆಚ್ಚಿ
ಅಜ್ಞಾನವನು ಮುಚ್ಚಿ ಸುಜ್ಞಾನವನು ಮೆಚ್ಚಿ
ಬಂದೆಯಾ ಬಾ ಬಳಿಗೆ...............

ಶ್ರವಣಕ್ಕೆ ಕಿವಿತೆರೆದು ಮನನಕ್ಕೆ ಮನ ಸೆಳೆದು
ತ್ಯಾಗಕ್ಕೆ ತನುವಿಡಿದು ಯೋಗಕ್ಕೆ ಮನವಿಡಿದು
ಕಳವಿಂಗೆ ಹಿಂದೆಗೆದು ಕಲೆಯೊಳಗೆ ಮುಂದರಿದು
ತಂತ್ರವನು ಹಳಿಹಳಿದು ಮಂತ್ರವನು ಒಲಿದೊಲಿದು
ಬಂದೆಯಾ ಬಾ ಬಳಿಗೆ...............

ಗೃಹವನ್ನು ಪರಿತ್ಯಜಿಸಿ ಗ್ರಹವನ್ನು ಪರಿಹರಿಸಿ
ಪರರರ್ಥವನು ತ್ಯಜಿಸಿ ಪರಮಾರ್ಥವನು ಬಯಸಿ
ಭವಶಿಕ್ಷೆಯನು ಲಯಿಸಿ ಶಿವದೀಕ್ಷೆಯನು ಭಜಿಸಿ
ಹಂಭಾವವನು ಹರಿಸಿ ಅನುಭಾವವನುಕರಿಸಿ
ಬಂದೆಯಾ ಬಾ ಬಳಿಗೆ................

ನಾದಕ್ಕೆ ಕಿವಿಗೊಟ್ಟು ವೇದಕ್ಕೆ ಒಲವಿಟ್ಟು
ಶಿವನಲ್ಲಿ ಧ್ಯಾಸಿಟ್ಟು ಭುವಿಯಲ್ಲಿ ಭಾಸಿಟ್ಟು
ಭ್ರಾಂತಿಯನು ಕಡೆಗಿಟ್ಟು ಶಾಂತಿಸುಖಕೆಡೆಗೊಟ್ಟು
ಹಾಳಬಟ್ಟೆಯ ಬಿಟ್ಟು ಬಾಳಬಟ್ಟೆಯ ತೊಟ್ಟು
ಬಂದೆಯಾ ಬಾ ಬಳಿಗೆ................

ನೀತಿಯದು ಕೈಗೂಡಿ ರೀತಿಯದು ಮೈಗೂಡಿ
ಸ್ವಾರ್ಥವನು ಹೊರದೂಡಿ ಸಾರ್ಥಕತೆಯೊಳಗೂಡಿ
ಬಿಂದುವನು ನೆರೆಕಟ್ಟಿ ಸಿಂಧುವನು ಸಲೆಮೆಟ್ಟಿ
ಭೂತವನು ಹೊರಗಟ್ಟಿ ಭೂತಿಯನು ಮಿಗೆಯೊಟ್ಟಿ
ಬಂದೆಯಾ ಬಾ ಬಳಿಗೆ................

ಮಾನವನು ಲೆಕ್ಕಿಸದಪಮಾನಕೆ ದುಃಖಿಸದೆ
ಹಸಿವನ್ನು ಲಕ್ಷಿಸದೆ ರಸವನ್ನು ಕಾಂಕ್ಷಿಸದೆ
ಲಾಭವನು ಗುಣಿಸದಲೆ ನಷ್ಟವನು ಗಣಿಸದಲೆ
ಜಯ ಬರಲುಃ ಹಿಗ್ಗದಲೆ ಅಪಜಯಕೆ ತಗ್ಗದಲೆ
ಬಂದೆಯಾ ಬಾ ಬಳಿಗೆ................

ದ್ವಂದ್ವಭಾವವನುಳಿದು ನಿರ್ದ್ವಂದ್ವದಲಿ ಬೆರೆದು
ಈಷಣತ್ರಯುವಳಿದು ಈಶನಂಘ್ರಿಯ ನೆನೆದು
ಪಾಶತ್ರಯುವ ಹರಿದು ದೇಶತ್ರಯುವ ತೊರೆದು
ತಾಪತ್ರಯುವ ಕಳೆದು ಪಾಪಪಂಕವ ತೊಳೆದು
ಬಂದೆಯಾ ಬಾ ಬಳಿಗೆ..............

ಅಂತಃಕರಣ ಚತುಷ್ಟಯು ಶಾಂತಿಯುದು ನಾಟೆ
ಪಂಚಕ್ಲೇಶವ ಮೀಟೆ ಪಂಚಕೋಶವ ದಾಟೆ
ಅರಷಡ್ವರ್ಗಂಗಳ ಹರಿದಾಟವನು ನಿಲಿಸಿ
ಆರೂರ್ಮಿಗಳ ಅಬ್ಬರವನು ಬಿಡದಣಗಿಸಿ
ಬಂದೆಯಾ ಬಾ ಬಳಿಗೆ..............

ಸಪ್ತ ವ್ಯಸನ ಸಪ್ತಧಾತುಗಳ ತರಿದಿಕ್ಕಿ
ಅಷ್ಟತನು ಮೋಹಷ್ಟಮದಗಳನು ಮುರಿದಿಕ್ಕಿ
ಅವಗುಣಕೆ ಹಗೆಯಾಗಿ ಶಿವಗುಣಕೆ ಕೆಳೆಯಾಗಿ
ಆಡುವುದು ಹಿಂದಾಗಿ ಮಾಡುವುದು ಮುಂದಾಗಿ
ಬಂದೆಯಾ ಬಾ ಬಳಿಗೆ..............

ಕಲಂಕವ ನೀಂ ತೊಳೆದು ಅಕಲಂಕತೆಯು ತಳೆದು
ಕಂಟಕವನತಿಗಳೆದು ನಿಷ್ಕಂಟಕದೆ ಸುಳಿದು
ಕಲ್ಪಿತಕೆ ಕಣ್ಣಿಡದೆ ಕಲ್ಪನೆಗೊಳಗಾಗದೆ
ಕಲ್ಪಾಂತವಾಗಿರ್ದ ಅಕಲ್ಪಿತವನು ಬಿಡದೆ
ಬಂದೆಯಾ ಬಾ ಬಳಿಗೆ..............

ಕಾಲಕ್ಕೆ ಕಾಮಕ್ಕೆ ಕಾರ್ಯಕ್ಕೆ ಕಾರಣಕೆ
ಸಿಲುಕದಲೆ ನಿಂತಿರುವ ಬ್ರಹ್ಮವಂ ತಿಳಿಯಲ್ಕೆ
ಅಖಂಡಲಾಸ್ಥಾನವನು ನೀನು ಆಸಿಸದೆ
ಅಖಿಲಾಂಡದೊಳಗಖಂಡ ಸ್ವರೂಪವರಿಯಲ್ಕೆ
ಬಂದೆಯಾ ಬಾ ಬಳಿಗೆ................

ಅಕೃತ್ಯವೆಸಗದಲೆ ಅಸ್ಪೃಶ್ಯನೆನಿಸದಲೆ
ಸತ್ಕೃತ್ಯವೆಸಗುತ್ತ ಸತ್ಪಾತ್ರನೆನಿಸುತ್ತ
ಅಕ್ಷಿಯನು ನಿಲಿಸುತ್ತ ಅಕ್ಷರನ ನೆನೆಯುತ್ತ
ಅಕ್ಷಮಣಿ ಜಪಿಸುತ್ತ ಅಕ್ಷಯನು ನೀನಾಗೆ
ಬಂದೆಯಾ ಬಾ ಬಳಿಗೆ................

ಅಗಣ್ಯವದಗುಣ್ಯವದಭಾವ್ಯವದಪ್ರಾಪ್ಯ,
ಅಗೋಚರವದಗಮ್ಯವದಚಿಂತ್ಯವದು ಗೋಪ್ಯ ;
ಅಗ್ರಗಣ್ಯವದಗ್ರಭಾವಿಯದಗ್ರಗಾಮಿ
ಅಗ್ರೇಸರವದಗ್ರೇಶ್ವರವದದನರಿಯೆ ಪ್ರೇಮಿ
ಬಂದೆಯಾ ಬಾ ಬಳಿಗೆ................

ಅಪಾರವದಘೋರವದಾಕಾರವದು ಭವಕೆ
ಅಪ್ರತಿಮವದನುಪಮದದವರಹುವೆ ಮನಕೆ
ಅನಾದಿಯದನಂತವದದ್ವಿತೀಯವು ಬ್ರಹ್ಮ
ಅನಾಮಯವದಜಾತವದಜಾಂಡಭರಿತಾತ್ಮ
ಬಂದೆಯಾ ಬಾ ಬಳಿಗೆ................

ಅಮೇಯುವದವನೋಘವದನೂನವದಭ್ಯರ್ಥಿ
ಅಮಾಯುವದವ್ಮೃತವದಮೂರ್ತವದಾತ್ಮಾರ್ಥಿ
ಅವ್ಯಕ್ತವದಶೋಕವದವಿಭಕ್ತವದು ಸ್ಮರಿಸು
ಅವ್ಯಯುವದವ್ಯವಚ್ಛಿನ್ನವದವಧರಿಸು
ಬಂದೆಯಾ ಬಾ ಬಳಿಗೆ................

ಚಿನ್ನಾದ ಚಿದ್ಬಿಂದು ಚಿತ್ಕಲೆಯು ಮಿಗೆ ಚಂದ
ಚಿದ್ರೂಪ ಚಿಜ್ಜ್ಯೋತಿ ಚಿದಾನಂದವು ಕಂದ
ಚಿಚ್ಚಕ್ಷು ಚಿಚ್ಚಿತ್ತು ಚಿದ್ಭಾವಗಳಿಂದ
ಚಿನ್ಮಯನ-ಚಿದಂಬರ ಸ್ವರೂಪನ ತಿಳಿಕಂದ
ಬಂದೆಯಾ ಬಾ ಬಳಿಗೆ................

ಜಗಚ್ಚಕ್ಷುವದು ಜಗತ್ಪ್ರಾಣವದು ಭಾವಿಸು
ಜಗಜ್ಜನಕವದು ಜಗತ್ತ್ರಾಣವದಂಗವಿಸು
ಜೀವನವಶಾಶ್ವತವು ಜೀವರತ್ನನೆನಿಸೈ
ಜೀವಮಾನದಲಿ ಜೀವನ್ಮುಕ್ತಿಯು ಗಳಿಸೈ
ಬಂದೆಯಾ ಬಾ ಬಳಿಗೆ................

ತ್ರಿಕರಣಗಳನು ತಡೆದು ತ್ರಿಗುಣಗಳನು ತೊಡೆದು
ತ್ರಿಕೂಟದಲಿ ನಿಂದು ತ್ರಿಪುಟಿಗಳ ನೀನುಳಿದು
ತತ್ವಮಸಿಯಃನು ನೆನೆದು ತಾದಾತ್ಮ್ಯವನು ಪಡೆ
ತತ್ಪರನು ನೀನಾಗಿ ತತ್ವದಲಿ ನೀನಡೆ
ಬಂದೆಯಾ ಬಾ ಬಳಿಗೆ................

ನಿರಂಗವು ನಿರ್ಗುಣವು ನಿರ್ಮಾಯ ನಿರಾಳವು
ನಿರೂಪವು ನಿಶ್ಶಬ್ದ ನಿರ್ಗಂಧ ನೀರಸವು
ನಿರುಪದ್ರವ ನಿರುಪಮ ನಿರುಪಾಧಿ ನಿರುಹಣವು
ನಿರಾಕುಲ ನಿರ್ದುಷ್ಟ ನಿರವಧಿ ನಿರ್ಲೇಪವು
ಬಂದೆಯಾ ಬಾ ಬಳಿಗೆ...............

ಪಿಂಡಾಂಡವದು ಬ್ರಹ್ಮಾಂಡವದಜಾಂಡವದು
ವೃತ್ಪಿಂಡವದು ಹೃತ್ಪಿಂಡವದು ತಿಳಿಯುವುದು
ಪರಮಾರ್ಥ ರೂಪಾದ ಪರಮಾತ್ಮನಂ ತಿಳಿಯೆ
ಪರಂತಪ ನೀನಾಗೆ ಪರಸುಖವನು ತಳೆವೆ
ಬಂದೆಯಾ ಬಾ ಬಳಿಗೆ...............

ಅಂಗವೇ ಸತಿಯಾಗು ಲಿಂಗವೇ ಪತಿಯಾಗು
ಸಂಗ ಸಮರಸವಾಗು ಮಂಗಳಮಯನಾಗು
ನಿಷ್ಕರ್ಮಿ ನೀನಾಗು ನಿಷ್ಪನ್ನ ಮತಿಯಾಗು
ನಿಷ್ಕಾಮಿ ನೀನಾಗು ನಿಷ್ಪತ್ತಿಗೊಳಗಾಗು
ಬಂದೆಯಾ ಬಾ ಬಳಿಗೆ...............

ನಿನ್ನೊಳಗೆ ಗುರುವಾಗಿ ನಿನ್ನೊಳಗೆ ಕುರುಹಾಗಿ
ಕಣ್ಣೊಳಗೆ ಕಣ್ಣಾಗಿ ಮನದೊಳಗೆ ಮನವಾಗಿ
ಬೆರೆಯುವೆಂ ಬಾ ಬಳಿಗೆ ಓ ಶಿಷ್ಯ ಕೇಳ್ ಭಾಷ್ಯ
ಪೊರೆಯುವೆಂ ನಿಲ್ಲೊಳಗೆ ಘನತೋಷ ಗುಣಪೋಷ್ಯ

ಭಾವದಲಿ ಬೆಳಗಾಗಿ ನಿರ್ಭಾವ ನಾವಾಗಿ
ತುರ್ಯದಲಿ ನಾವ್ ತೂರಿ ತುರ್ಯಾತೀತರಾಗಿ
ಬೆರೆಯೋಣ ಬೆಳಗೋಣ ಓ ಶಿಷ್ಯ ಕೇಳ್ ಭಾಷ್ಯ
ನಲಿಯೋಣ ನಿಲ್ಲೋಣ ಘನತೋಷ ಗುಣಪೋಷ್ಯ

# ನಿನಗೆ ಚನ್ನವೆ?

ಬಸವನಾಳರ್ರು ಎಂಬ ಹೆಸರದು ನಮ್ಮನಾಡೊಳು
ಜಸವನೈದಿತು ; ಸಿರಿಯು ತಂದಿತು ನಮ್ಮ ನುಡಿಯೊಳು ;
ತನುವು ತಾನದು ತೋರದಾಯಿತು ಜನರ ಕಣ್ಣೊಳು
ಘನತೆ ನೆಲಸಿತು ಎಲ್ಲ ಜನಗಳ ಮನದ ತಾಣೊಳು.

ಪ್ರಾಚ್ಯಕಾವ್ಯವ, ಬಸವ ವಚನವ ಬಿಡದೆ ಶೋಧಿಸಿ
ವಾಚ್ಯವೆನಿಸುತ ಮೆಚ್ಚುಗೊಳಿಸಿದೆ ನೀನು ಸಾಧಿಸಿ
ನಾಡ ನುಡಿಯಲಿ ನವ್ಯ ಚೇತನ ಜಲವ ಹರಿಯಿಸಿ
ನೋಡಿ ನಲಿದೆಯೊ ನಾಡದೇವಿಗೆ ಸೇವೆ ಸಲ್ಲಿಸಿ

ಪೂರ್ವ ಕಾವ್ಯದ ಖಣಿಯು ಬೇಕಾದನಿತು ಇರುತಿರೆ
ಅದನು ಶುದ್ಧಿಸಿ ಕೊಡುವೆಯೆನ್ನುತ ಜನರು ಬಗೆದಿರೆ
ಆವ ಮಾತನು ಹೇಳಕೇಳದೆ ನಾಡರನ್ನವೆ !
ದೇವನಲ್ಲಿಗೆ ಪಯಣವಾದುದು ನಿನಗೆ ಚನ್ನವೆ?

# ನಿವಾಸ

ಬೆಂಗಳೂರಿನೊಳೊಂದು ಚಲುವ ನಿವಾಸವ
ಗಳಿಸಿಹೆವು – ಅನುಗೊಳಿಸಿಹೆವು,
ಚೆಂಗುಲಾಬಿ ಹಲಸಿನ ಮಾವಿನ ಮರಗಳ
ಬೆಳಸಿಹೆವು – ನಾವುಳಿಸಿಹೆವು.

ಹೊಂಗೆಯು ನೆಲ್ಲಿಯು ಸಂಪಿಗೆ ಗಿಡಗಳು
ಬೆಳದಿಹವು – ಮುಗುಳೊಡೆದಿಹವು,
ತೆಂಗಿನಮರ ಹೊಂಬಾಳೆಯು ಹಾಕುತ
ಫಲಿಸಿಹುದು - ಚಲುವೆಸೆದಿಹುದು

ಗಂಧದ ಮರವದು ಕಾಷ್ಠದೆ ಕಂಪನು
ತುಂಬಿಹುದು – ನಲಗಿಂಬಹುದು,
ತೆಂಗಿನ ಫಲವೆಳನೀರಿನ ತಂಪನು
ಉಣಿಸುವುದು – ಒಳತಣಿಸುವುದು.

ಮಾವಿನ ಹಲಸಿನ ಹಣ್ಣುಗಳೆಲ್ಲ
ಸವಿಯಲವು – ಸಲೆಸವಿಯಹವು,
ವನಸಂಪಿಗೆ ಮನೆಮಲ್ಲಿಗೆ ಹೂಗಳು
ಮೂಸಲವು – ನೆರೆಲೇಸಹವು.

ಬಾಗಿಲ ಬಳಿಯಲಿ ಬೆಳೆದಿಹ ಮರವದು
ಅತ್ತರದು – ಬಲುಬಿತ್ತರದು,
ಆದರಂಟದರೆಲೆ ಅದರರಳೆಲ್ಲ
ಕಂಪಹುದು – ಬಲುಸೊಂಪಹುದು.

ದುರ್ಗದ ಬಜ್ಜಣ್ಣನವರು ಸೇವೆಯ
ಸಲಿಸಿದರು – ನೆಲೆ ನಿಲಿಸಿದರು,
ಸ್ವರ್ಗದ ಸುಖವನು ಸಜ್ಜನರೆನಿಸುತ
ಗಳಿಸಿದರು – ಜಸವುಳಿಸಿದರು.

ಪಾರ್ವತಿದೇವಿಯ ಬೆಂಬಲದಿಂದಲಿ
ಬಾಳಿಹೆವು – ನಾವ್ ಬದುಕಿಹೆವು,
ಭಾರತಿದೇವಿಯ ಒಲವಿಂ ಕವನವ
ಹೆಣದಿಹೆವು – ಮನತಣಿದಿಹೆವು.

ಜೀವವು ತೊಟ್ಟಿಹ ದೇಹನಿವಾಸವು
ಬಂದಿಹುದು – ತಾನೊಂದಿಹುದು
ಗುಣಲತೆ ಚಿಗುರದೆ ಎದೆಹೂವರಳದೆ
ಕಂದಿಹುದು – ತಾ ಕುಂದಿಹುದು.

ಜೀವನಿವಾಸವು ಬಹುದಿನ ಬಾಳದೆ
ಸೋರುವುದು – ಕೊನೆ ಸೇರುವುದು,
ದೇವನಿವಾಸವು ಬಹುದಿನ ಬಾಳನು,
ಸಾರುವುದು – ಘನ ಸೇರುವುದು.

# ಏರಿ ನಿಂದುದೆ ಲೇಸು

ಸೂರ್ಯಸಿಂಹಾಸನವನೇರಿ ನಿಂದುದೆ ಲೇಸು
ಸೇವೆಯನು ಸಲ್ಲಿಸುವ ಭಾಗ್ಯವೆಮಗಾಯ್ತು
ಐಶ್ವರ್ಯ ವೈಭವವು ತಾನಿಲ್ಲದಿರಲೇನು
ಸಾರಸ್ವತದೊಲುಮೆಯೆ ಸೌಭಾಗ್ಯವಾಯ್ತು.

ಶ್ರೀಗಿರಿಯ ಪುಣ್ಯಮಯ ಪ್ರಾಚೀನ ಚರಿತೆಯದು
ನಮ್ಮೆದೆಯ ರಸವಾಗಿ ನಿಂದಿಹುದು ಒಳಗೆ
ಸಾಗರದ ಸಿರಿಸೊಬಗ ಸಾರುತ್ತ ಕಂಗಳಿಗೆ
ಸ್ಥಳ ಪುರಾಣರೂಪದೆ ಸಂದಿಹುದು ಹೊರಗೆ!

ಹಿಂದೆಂದು ಸಾರದಿಹ ಲೇಸವದು ಪೀಠದಲಿ
ಎಮಗಿಂದು ಸೊಗಸಾಗಿ ನೆರೆ ಸಾರಿಬರಲಿ
ಮುಂದೆಂದಿಗಳಿಯದಿಹ ಸಾಹಿತ್ಯ ಜೀವನವು
ಎಡೆಬಿಡದೆ ಸಂತಸದಿ ತಾ ಸಾಗುತಿರಲಿ.

# ಹೇಳು ಕೆಳದಿ !

ಏನು ಏನು ಹೇಳು ಕೆಳದಿ
ಯಾವಚಿಂತೆ ಹೊಕ್ಕ ಮನದಿ
ಅನ್ನ ನೀರು ಏಕೆ ತೊರದೆ
ಮೌನಭಾವವೇಕೆ ತಳದೆ ?

ಜೀವಗೆಳತಿ ನೀನು ಎನಗೆ
ಜೀವವಿರದು ಬಿಟ್ಟುಗಳಿಗೆ
ಯಾವಚಿಂತೆ ಹೇಳು-ಎನಗೆ ;
ಯಾವದಿಗಿಲು ಬೇಡ ನಿನಗೆ !

ಜೊತೆಯ ಕೆಳದಿಯರರು ಎಲ್ಲಿ
ತೊತ್ತುಗೆಲಸದವರು ಎಲ್ಲಿ
ನಿನ್ನ ಜೊತೆಗೆ ಬರುವರೇನು
ಆಚೆಹಾಕು ಅವರದೇನು ?

ಹೋಗಬೇಡ ಅವರ ಹಿಂದೆ
ಹೋಗೆ ಬಹುದು ನಿನಗೆ ನಿಂದೆ
ನಿನ್ನ ಜೊತೆಗೆ ಬರುವುದೊಂದೆ
ಇನ್ನು ಸಾಕು ಅವರ ನಿಂದೆ.

ಮನೆಯ ಬಾಳು ಬೇಡವಾಯ್ತೆ,
ಮನದವೃತ್ತಿ ಬೇರೆಯಾಯ್ತೆ?
ಇರುವ ಸಿರಿಯು ಸಾಲದೆಂದೊ
ಪೊರೆವರಾರು ಇಲ್ಲವೆಂದೊ ?

ಧ್ಯೇಯ ಶ್ರವಣ ಬೇಸರಾಯ್ತೆ,
ಹ್ಯೇಯ ಸ್ಮರಣ ಆಸರಾಯ್ತೆ?
ಮಾಯಮಾಟ ಹೆಚ್ಚಿಹೋಯ್ತೆ,
ಮೈಯ ನೋಟ ಮೆಚ್ಚಿಯಾಯ್ತೆ?

ಪ್ರೇಮಪಾಶಗಳನು ಹರಿದು
ಸೋಮಶೇಖರನೊಳು ಬೆರೆದು
ಆ ಮಹಾಸುಖವನು ಸುರಿದು
ಸೀಮೆಮೀರಿ ಸತತ ನಲಿದು.

ಹೆಣ್ಣು ಹೊನ್ನುಗಳನು ದೂಡು
ಚನ್ನಶಿವನ ಬಿಡದೆ ಹಾಡು
ಹೊತ್ತುಹೊರಳುತಿಹುದು ನೋಡು
ಗೊತ್ತುಗುರಿಯನರಿದು ಕೂಡು.

ಆತ್ಮಸಖಿಯೆ ಹೇಳ್ವೆ ನಾನು
ಆತ್ಮಸುಖದ ಸವಿಯು ನೀನು
ಬಿಡುವ ಚಿಂತೆ ಮಾಡಬೇಡ
ಕೆಡುವ ಚಿಂತೆ ಗೈಯಬೇಡ.

ದೇವಧ್ಯಾನ ಮನದಿ ಮಾಡು
ಜೀವ ಜನನ ಮರಣದೂಡು
ದೇವಧ್ಯಾನವದುವೆ ಶಾಂತಿ
ಜೀವಸ್ಮರಣ ವಿದುವೆ ಭ್ರಾಂತಿ !

ಸಾಕುಮಾಡು ವಿಷಯ ನೆನಹು
ಸಾಕುಮಾಡು ಭವದ ಸುಳುಹು
ಏನು ಏನು ಹೇಳು ಕೆಳದಿ
ಯಾವ ಚಿಂತೆ ಮಾಳ್ಪೆ ಮನದಿ ?*

* ಇಚ್ಛಾಶಕ್ತಿಯನ್ನು ಕುರಿತು ಹಾಡಿದುದು.

# ದುಗ್ಗಳೆ

ನಿನ್ನದಾವ ಪೂರ್ವ ಪುಣ್ಯದಿಂದ ದುಗ್ಗಳೆ
ಮುನ್ನ ದೇವದಾಸನನ್ನು ಕೂಡಿ ಬಾಳಿದೆ
ಮೂಡಿ ಬೆಳಗಿದೆ
ಮಾಡಿ ಬದುಕಿದೆ.

ನಿನ್ನ ಪಾತಿವ್ರತ್ಯ ಪುಷ್ಪ ನಮ್ಮ ನಾಡೊಳು
ಇನ್ನು ಬಾಡದಂತೆ ಮೆರೆಯುತಿಹುದು ಮುದದೊಳು
ಕಂಪು ಸೂಸಿ ವನದೊಳು
ಸ್ತ್ರೀಜನ ಮನದೊಳು

ಭಕ್ತಿಯಲ್ಲಿ ಅನ್ನದಾನದಲ್ಲಿ ನಿನ್ನನು
ಭಕ್ತಿವೀರ ಬಸವ ಮೆಚ್ಚಿ ಹೊಗಳಿದ
ವಚನರಚಿಸಿ ಹಾಡಿದ
ಹೃದಯ ಬೆರಸಿ ಹರಸಿದ.

ಶರಣೆ ಶಿವನಚರಣೆ ಜೀವಕರುಣೆ ದುಗ್ಗಳೆ
ಹರಣೆ ದಾಸಸ್ಮರಣೆ ಶರಣೆಯರೊಳಗಗ್ಗಳೆ
ದೇವ ವ್ಯಗ್ಗಳೆ
ದಾಸ ದುಗ್ಗಳೆ!

ನಿನ್ನ ಪುಣ್ಯನಾಮವದುವೆ ನಮಗೆ ರಮ್ಯವು
ನಿನ್ನ ಪುಣ್ಯನೇಮವದುವೆ ನಮಗೆ ಗಮ್ಯವು
ನುಡಿಯೆ ಕಾವ್ಯವು
ನಡೆಯೆ ದಿವ್ಯವು.

ನೀನು ನಮ್ಮ ನಾಡಕಣಿಯು ಎಲ್ಲ ಪರಿಯೊಳು
ನೀನು ಶಿವನ ಶರಣೆಯರಿಗೆ ಮಣಿಯು ಶಿರದೊಳು
ನುತಿಪೆ ಮುದದೊಳು
ನೆನೆವೆ ಮನದೊಳು.

ಅಕ್ಕಿ ಮಳಲು ಕೂಡಿ ಕೊಡಲು ಅಡುಗೆ ಮಾಡಿದೆ
ಎತ್ತಿದೊನಕೆ ಅಂತರಾಳದಲ್ಲಿ ನಿಲಿಸಿದೆ
ಬೇಸರ ಇಲ್ಲದೆ
ದಾಸೋಹ ಮಾಡಿದೆ.

ನಿನ್ನ ನಡೆ ರನ್ನಪಡೆ
ಇನ್ನು ಬಿಡೆ ಬನ್ನಕೆಡೆ
ಬಿಡದೆ ಬೋಧಿಸು
ನಮ್ಮ ಬಗೆಯ ಶೋಧಿಸು.

ನಿತ್ಯದಲಿ ನೆಯ್ಗೆಯಲಿ
ಸತ್ಯದಲಿ ತತ್ವದಲಿ
ಮನವ ಮಾಡಿದೆ
ಮಹವ ಕೂಡಿದೆ.

ನಿನ್ನಸೈಪುಸಿರಿಯು ಬಿಡದಲೆಮ್ಮನೆಂದಿಗು
ಚನ್ನಸೊಗವನಿತ್ತು ಜಗದೊಳು ಕಾಪಾಡಲಿ
ಜವದೊಳು ಕೈಗೂಡಲಿ
ಜವನ ಭಯವ ದೂಡಲಿ

# ದಾಸಮಯ್ಯ

ದಾಸಮಯ್ಯನವನು ತಾನು
ದಾಸನಾಗಿ ದೇವನಲ್ಲಿ
ಜಗದ ಜಂಜಡವನು ತಳ್ಳಿ
        ತೊರೆದು ಬಂದನು.
ಜಗದೊಡೆಯನ ಹೃದಯದಲ್ಲಿ
        ಬೆರೆದು ನಿಂದನು.

ರೂಢಿ ತತ್ವಗಳನು ತಿಳಿದು
ನಾಡನೆಲ್ಲ ಸುತ್ತಿ ಸುಳಿದು
ಕಾಡ ಜನಕೆ ನಾಡಬಾಳ
        ಗುಟ್ಟ ಪೇಳ್ದನು,
ನಾಡಜನಕೆ ಗೂಢ ಮೇಳ
        ಮುಟ್ಟ ತೋರ್ದನು.

ಸಂಪ್ರದಾಯ ಯತಿವರರನು
ಅಪ್ರಬುದ್ಧ ಮತಿಯುತರನು
ಸುಪ್ರಕೃಷ್ಟ ಮಾರ್ಗದಲ್ಲಿ
        ನಡೆಯ ಹಚ್ಚಿದ,
ಸುಪ್ರಶಸ್ತ ಜ್ಞಾನದಲ್ಲಿ
        ನುಡಿಯ ಹಚ್ಚಿದ.

ಮೊದಲು ಮಧುರ ವಚನ ರಚಿಸಿ
ಮೊದಲನುಭವಕೇಂದ್ರ ಸೃಜಿಸಿ
ನಾಡ ನುಡಿಯ ಬಳಸಿ ಬೆಳಸಿ
ಅಮರನೆನಿಸಿಹ,
ನಾಡ ಜನರ ಮರವೆ ಹರಿಸಿ
ಅಮೃತವುಣಿಸಿಹ.

ತಾನೆ ನಿತ್ಯ ಬಟ್ಟೆನೆಯ್ದು
ತಾನೆ ಸತ್ಯತತ್ವ ಸುಯ್ದು
ನಾಡಿನಲ್ಲಿ ಶುದ್ಧ ಕಾಯ–
ಕವನು ಬೆಳಸಿಹ,
ರೂಢಿಗೀಶನಿಂದ ತವ ನಿ–
ಧಿಯನು ತಳೆದಿಹ.

ದೇವದಾಸ–ದಾಸದೇವ
ಭುವನ ಜನರನೆಲ್ಲ ಕಾವ
ಅವನ ಬೆಡಗು ನುಡಿಯ ಕೇಳೆ
ಕರ್ಣ ಪಾವನ,
ಅವನ ಸೊಬಗು ನಡೆಯ ತಾಳೆ
ಪೂರ್ಣ ಜೀವನ.

# ಭಾಷ್ಯಾಚಾರ್ಯ !

೧

ಅಂಗಗುಣಗಳೆಲ್ಲ ಕಳೆದು
ಲಿಂಗಗುಣಗಳೆಲ್ಲ ತಳೆದು
ಮಂಗಳಾತ್ಮನಾಗಿ ತೋರ್ಪ
ಪರಮ ಪೂಜ್ಯನು ;
ಲಿಂಗಸಂಗ ಸುಖದೊಳಿರ್ಪ
ಮಹಿಮನೀತನು.

೨

ಕಾಯಸುಖಕೆ ಕರಣಸುಖಕೆ
ಮಾಯಬಲಕೆ ಮನದ ಛಲಕೆ
ಹೇಯ ಸಂಸರಣಕೆ ಸಿಲುಕ-
ದಚ್ಚಚಾಗಿಯು ;
ಧ್ಯೇಯ ಸಿದ್ಧಿಗಾಗಿ ದಮಿಪ
ನಿಚ್ಚಯೋಗಿಯು.

೩

ಮನೆಯ ಮಠದ ಹಂಗು ಹರಿದ
ಮನದ ಬಯಕೆಗಳನು ತೊರೆದ
ಜನದ ಹೊಗಳಿಕೆ ತೆಗಳಿಕೆಗಳ-
ನುಳಿದ ವೀರನು ;
ಕನಸು ಕಿನಸುಗಳ್ಗೆ ಸೋಲ-
ದಿರುವ ಶೂರನು.

೪

ನಿತ್ಯ ಶೀಲಶರಧಿಚಂದ್ರ
ಸತ್ಯದಾಂತಿಶಾಂತಿಕೇಂದ್ರ
ಮೃತ್ಯುಪಥವ ತುಳಿಯದಿಂದ್ರ-
ನಾಗಿ ಬಾಳಿಹ ;
ಸ್ತುತ್ಯ ಸಕಲಸುಗುಣ ಸಾಂದ್ರ-
ನಾಗಿ ಬೆಳಗಿಹ.

೫

ಮೇಲು ತಾವ ಬಯಸದಿರ್ಪ
ಕೀಳುಭಾವ ತಳೆಯದಿರ್ಪ
ಮೇಲುಕೀಳು ಗಣಿಸದಿರ್ಪ
ಸಾಮ್ಯವಾದಿಯು ;
ಹಾಲುಮಠದ ಸ್ವಾಮಿ, ಸಕಲ
ಸ್ವಾಮ್ಯಭೇದಿಯು.

೬

ಹರನಪೂಜೆ ಹರಣವೆಚ್ಚಿ
ಕರಣಮುಟ್ಟಿ ಚರಣಕಟ್ಟಿ
ಗುರುಕುಮಾರನಾಶ್ರಮದೊಳು
ಮಾಳ್ಪ ಮುದದೊಳು ;
ಗುರು ಕುಮಾರನಾಶ್ರಮಕ್ಕೆ
ಜನಕ ನಿಜದೊಳು.

೭

ಕಾಯಕಷ್ಟದಿಂದ ಗಳಿಸಿ
ಭಕ್ತ ಜನರ ಭಾವವೊಲಿಸಿ
ಶಿವಾದ್ವೈತ ತತ್ವಪ್ರಚುರ
ಸಮಿತಿ ರಚಿಸಿಹ;
ಭುವನದೊಳಗೆ ಗಿರಿಯಪುರದ
ಖ್ಯಾತಿ ಬೆಳಸಿಹ.

೮

ಕೈವಲ್ಯೋಪನಿಷತ್ತಿಗೆ
ಶಿವಾದ್ವೈತ ಭಾಷ್ಯ ಬರೆದು
ಭುವನವೆಲ್ಲ ತಿಳಿಯೆ ಭಾಷ್ಯ
ಕರ್ತನೆನಿಸಿಹ;
ಭಾವಶುದ್ಧಿಯಿಂದ ಭವ್ಯ
ಕೀರ್ತಿ ಗಳಿಸಿಹ.

೯

ಸತತಯೋಗ ನಿರತಚಿತ್ತ
ಸತತತ್ಯಾಗಭರಿತಹಸ್ತ
ಸತತರಾಗ ರಹಿತಚಿತ್ತ
ನಾಗಿ ನಲಿಯುವ;
ಸತತ ಭೋಗವಳಿದು ಸ್ವಸ್ಥ
ನಾಗಿ ತೊಳಗುವ.

೧೦

ಭುವನ ಸಕಲ ಸುಖವ ದೂಡಿ
ಶಿವನ ಜಪವ ತಪವ ಮಾಡಿ
ಭುವನದಲ್ಲಿ ಸರ್ವಯೋಗಿ
ವರ್ಯನಾಗಿಹ;
ಶೈವಯೋಗದಿಂದ ಶಿವಾ-
ಚಾರ್ಯನಾಗಿಹ.

೧೧

ನಾಮದಲ್ಲಿ ಸದಾಶಿವನು
ನೇಮದಲ್ಲಿ ಸದಾ–ಶಿವನು
ಹೇಯ ಭೂಮಿಗಳಲಿ ಪ್ರೇಮ
ವಿಲ್ಲದಾತನು;
ಕಾಮ ಕೋಪ ಲೋಭ ಮೋಹ
ವಳಿದ ಪೂತನು.

೧೨

ಜ್ಞಾನದಾನಿ ಜಗದ ಗುರುವೆ
ಜನರ ಪೊರೆವ ಕಲ್ಪತರುವೆ
ವಚನಸುಧೆಯ ಸೊಗವನಿತ್ತ
ಕಾಮಧೇನುವೆ;
ಮನವ ತೀಡು ಮಹವತೋರು
ನಮಿಸಿ ಬೇಡುವೆ!

# ಗಂಗೆ - ಗೌರಿ

ಅರಿವೆಂಬ ಗಿರಿಯಲ್ಲಿ ಹೊಮ್ಮಿ ಹರಿವಳು ಗಂಗೆ
ಈರೇಳು ಭುವನ ಜೀವಿಗಳ ಜೀವನ ತುಂಗೆ!
ಕಬ್ಬದಲಿ ಕಲೆಯಾಗಿ ಹಬ್ಬದಲಿ ಬೆಲೆಯಾಗಿ
ಉಬ್ಬರದೆ ಹರಿಯುವಳು ರಸನೆಯಲಿ ರಸವಾಗಿ!
ವಾಣಿಯನು ಉಲಿಸುವಳು ವೀಣೆಯನು ನುಡಿಸುವಳು
ಮನವಿರದೆ ನಲಿಸುವಳು ಮತಿವಂತರೊಲಿಸುವಳು.

ಕ್ರಿಯೆಯೆಂಬ ತೊಡೆಯಲ್ಲಿ ಕುಳಿತಿಹಳು ಚಲುಗೌರಿ
ನಿಲುಗನ್ನಡಿಯ ತೆರದಿ ನಿರ್ಮಲಳು ನಿಜಗೌರಿ!
ಮೂಲೋಕ ಪ್ರಾಣಿಗಳ ತ್ರಾಣವಾಗಿಹ ಶೌರಿ
ಮಲಯುತರಿಗೆ ಮಾಯಾನ್ವಿತರಿಗೆ ಶುಭಕಾರಿ!

ಗಂಗೆ ತಾಂ ತಿಳಿನೀರು, ಗೌರಿ ತಾಂ ವಸುಂಧರೆ
ನೀರು ನೆಲಗಳನುಳಿದು ಜಗವಿದೇಂ ಬಾಳುವುದೆ?
ಗಂಗೆ ಜ್ಞಾನದ ಬೆಳಕು, ಗೌರಿ ಸತ್ಕ್ರಿಯೆ ಬದುಕು
ಜ್ಞಾನಕ್ರಿಯೆಗಳನುಳಿದು ಜನವಿದೇಂ ಬದುಕುವುದೆ?
ತೊರೆಗಳನು ಹರಿಸುವಳು ನೆರೆಹೊರೆಯ ಬೆಳಸುವಳು,
ಸಿರಿಸಂಪದವ ನೆರೆಚಲುವ ತಾಂ ಕರುಣಿಸುವಳು.
ಬೀಜಗಳ ನುಂಗುವಳು ಗಿಡಬಳ್ಳಿ ಬೆಳೆಯುವಳು,
ಹೂವುಗಳ ಸೂಡುವಳು ಹಣ್ಣುಗಳ ನೀಡುವಳು.

ಓ ಗಂಗೆ, ಓ ಗೌರಿ ನೀವಲ್ತೆ ಪರಿಕಿಸಲು,
ಜಗಪೊರೆವ ಯುಕ್ತಿ-ಶಕ್ತಿ ಸ್ವರೂಪಾತ್ಮರು.
ಮೂಲೋಕ ಮಾತೆಯರೆ, ಮೂಲೋಕ ಖ್ಯಾತೆಯರೆ

ಸಾಲೋಕ್ಯ ಸಾಮೀಪ್ಯ ಸಾರೂಪ್ಯ ದಾತೆಯರೆ
ನಮಿಸುವೆನು ನಲಿನಲಿದು, ನುತಿಸುವೆನು ಒಲಿದೊಲಿದು,
ಸುಜ್ಞಾನ-ಸತ್ಕ್ರಿಯೆಗಳೊಲಿದಿತ್ತು ಪಾಲಿಸಿರೆ!

ಗಂಗೆ ಗೌರಿಯು ನೆಪದೆ ಜ್ಞಾನಕ್ರಿಯೆಗಳನಿತ್ತು
ನೀರು ನೆಲಗಳನಿತ್ತು ಪೊರೆದಭವ ಪೊಡಮಡುವೆ.
ಸಾಯುಜ್ಯಪದವಿಯನು ಪಡೆಯಲ್ಕೆ ಹೇ ದೇವ,
ಆಯುಷ್ಯವಿರುವನ್ನೆಗಂ ನಿನ್ನನಾಂ ಬೇಳ್ಪೆ!

---

## 'ಹೊನ್ನ ಹಕ್ಕಿ'

ಇದೊಂದು ಕವನ ಸಂಗ್ರಹ. ಕವಿತೆಗಳ ಶೇಖರಣವನ್ನು 'ಹೊನ್ನ ಹಕ್ಕಿ' ಎಂದು ಕರೆದಿರುವುದು ತುಂಬ ಒಪ್ಪತಕ್ಕದ್ದೆ. ಹೊನ್ನಿನಷ್ಟು ಬೆಲೆಯ ವಿಚಾರಗಳೇ ಕವಿತ್ವಕ್ಕೆ ಅರ್ಹವಾದ ಸಂಗತಿಗಳು. ಕವಿತ್ವ ವಿಚಾರಗಳು ಮನೋರಾಜ್ಯದ ಮೇಲೆ ಹಕ್ಕಿ ಹಾರಿ ಹೋಗುವಂತೆ ಹರಿದು ಹೋಗಬೇಕು. ಆಗಲೇ ಮನಸ್ಸು ಹರ್ಷವಾಗುವುದು. ಹರ್ಷಚಿತ್ತ ನವಕವಿತೆಗಳನ್ನು ಉಕ್ಕಿಸೀತು. ಸೂರ್ಯಸಿಂಹಾಸನಾಧೀಶ್ವರರೂ ಚನ್ನಬಸವರಾಜರೂ ಆದ ಗೂಳೂರಿನ ಸಿಡುಮಾವಿಡಿ ಶ್ರೀಶೈಲ ಸಂಸ್ಥಾನದ ದೇಶೀಕೇಂದ್ರ ಶಿವಾಚಾರ್ಯರು ತಮಗೆ ಯಥಾವಿಧಿ ಒದಗುತ್ತಿರುವ ಪಾದಪೂಜೆ, ಪಾದಸೇವೆ ಇವೇ ಮುಂತಾದ ಷೋಡಶೋಪಚಾರ ತಲ್ಲೀನರಾಗಿ ಆಗಾಗ್ಗೆ ತೋರಿದೆರಡು ಉಪದೇಶವಿತ್ತುಕೊಂಡು ಕಾಲಹಾಕಬಹುದಾಗಿದ್ದರೂ ಆ ನೀರಸ ಮಾರ್ಗಬಿಟ್ಟು ಗುರುಪೀಠಕ್ಕೆ ಲಭಿಸಿದ ಸಾಹಿತ್ಯಾಭ್ಯಾಸವನ್ನು ಸಾಹಿತ್ಯಾಭಿಮಾನಕ್ಕೆ ಪರಿವರ್ತಿಸಿಕೊಂಡದ್ದರಿಂದಲೇ ಅವರ ಹೃದ್ಕಮಲದಿಂದ ಈ ಹೊನ್ನಹಕ್ಕಿ ಹಾರಿಬಂದದ್ದು. ಇಂಥ ಹಕ್ಕಿಗಳು ಅಂಥ ಹೃದಯದಲ್ಲಿ ಗೂಡುಮಾಡಿಕೊಳ್ಳುವುದು. ಈ ವಿಧ ಹಕ್ಕಿಗಳು ಆ ಗೂಡಿನಲ್ಲಿ ಇನ್ನೂ ಎಷ್ಟಿವೆಯೋ ಬಲ್ಲವರಾರು?

'ಪ್ರಜಾವಾಣಿ'
೧-೨-೧೯೫೩

'ಕಂಠಿ'

Cover Printed at Shree Ramakrishna Press